# ವಿಜ್ಞಾನ ದೀಪಕರು



೨೨೫
೧೯೪೮

ಗ್ರಂಥಕರ್ತರು ಮತ್ತು ಪ್ರಕಾಶಕರು:
**ವಿ. ಗುರುರಾಜನ್, ಬಿ.ಎ.**

# ವಿಜ್ಞಾನ [illegible]ಕರು

ವಿ. ಗುರುರಾಜನ್, ಬಿ.ಎ.



ಸಮಾಜ ಪುಸ್ತಕಾಲಯ
ಧಾರವಾಡ

ಪ್ರಕಾಶಕರು :
ವಿ. ಗುರುರಾಜನ್
ಬೆಂಗಳೂರು

# ಬಿನ್ನಹ



ಈ ಪುಟ್ಟ ಪುಸ್ತಕದಲ್ಲಿ ಕೆಲವು ಮಂದಿ ವಿಜ್ಞಾನಿಗಳ ಸಾಹಸಗಳು ಚಿತ್ರಿತವಾಗಿವೆ.

ಅವರ ಜೀವನದ ಆದರ್ಶ ಇದನ್ನು ಓದುವವರಲ್ಲಿ ಕೆಲವರಿಗಾದರೂ ಬೆಳಕನ್ನು ನೀಡಲಿ ಎಂಬುದೇ ನನ್ನ ಹಾರೈಕೆ.

—ಗ್ರಂಥಕರ್ತ.

# ಪ ರಿ ವಿ ಡಿ







೧

# ಮಣ್ಣಿನಿಂದ ಹೊನ್ನು

''ಜೋಸಯ!" ''ಜೋಸಯ!!"

ಕೂಗಿದವನು ಕಾರ್ಖಾನೆಯ ಬಾಗಿಲ ಬಳಿ ನಿಂತಿದ್ದ ಭಾರಿ ಮನುಷ್ಯ. ಅವನು ಕರೆದುದು ಮುಂದುಗಡೆ ಸ್ವಲ್ಪ ದೂರದಲ್ಲಿ ಬೆಂಚಿನ ಮೇಲೆ ಕುಳಿತಿದ್ದ ಹುಡುಗನನ್ನು.

ಕರೆದುದು ಹುಡುಗನಿಗೆ ಕೇಳಿಸಲಿಲ್ಲವೇನೋ ? ತನ್ನಷ್ಟಕ್ಕೆ ತಾನು ಕೈಲಿದ್ದ ಕುಂಚವನ್ನು ಎಚ್ಚರಿಕೆಯಿಂದ ಬೆಂಚಿನ ಮೇಲಿದ್ದ ಬಣ್ಣದ ತಟ್ಟೆಯಲ್ಲಿ ಅದ್ದಿ ಅದ್ದಿ ಆ ಬಿಳಿಯ 'ಇನಾಮಲಿ'ನ ಮೇಲೆ ಚಿತ್ರವನ್ನು ಬರೆಯುತ್ತಲೇ ಇದ್ದನು.

ಆ ಭಾರಿ ಮನುಷ್ಯನಿಗೆ ರೇಗಿತು. ''ಎಂಥ ಪೋರ ಇವನು ? ಇವನನ್ನು ಎಷ್ಟು ಸಲ ಕರೆಯಬೇಕೋ ಕಾಣೆ''—

ಗೊಣಗಿಕೊಂಡೇ ಆತನು ಒಂದು ಕೊನೆಯಿಂದ ಇನ್ನೊಂದು ಕೊನೆಗೆ ನಿಧಾನವಾಗಿ ನಡೆಯುತ್ತಾ, ಸ್ವಲ್ಪ ಹೊತ್ತು ಏನೋ ಯೋಚಿಸಿ ಬಾಲಕನ ಬಳಿ ಬಂದನು.

ಬಾಲಕನು ಚಿತ್ರ ಬರೆಯುತ್ತಲೇ ಇದ್ದನು.

ದೊಡ್ಡವನು ಹುಡುಗನ ಕಿವಿಯಲ್ಲಿ ಗಟ್ಟಿಯಾಗಿ 'ಜೋಸಯ!' ಎಂದು ಕಿರಿಚಿದನು.

ಕಲಾಸಮಾಧಿ ಭಗ್ನವಾಯಿತು. ಬಾಲಕ ಎಚ್ಚೆತ್ತು ನಿಂತನು. ತಟ್ಟನೆ ಅವನು ಹೌಹಾರಿ ನಿಂತಾಗ ಕುಂಚದಲ್ಲಿದ್ದ ಬಣ್ಣ ಸಿಡಿದು ಚಿತ್ರ ವಿಚಿತ್ರವಾಯಿತು. ಕಲೆ ಕೆಟ್ಟರೆ ಕಲೆಗಾರನಿಗಾಗುವ ಅಶಾಂತಿ ಅವರ್ಣನೀಯ.

ಆದರೆ ಚಿಕ್ಕವನು ಕತ್ತೆತ್ತಿ ನೋಡಿದಾಗ ಮುಂದಿದ್ದವನು ಅಣ್ಣ ಥಾಮಸ್! ಕೋಪವೇನೋ ಸ್ವಲ್ಪ ತಗ್ಗಿತಾದರೂ, ಜೋಸಯ ಬೇಸರದಿಂದ,—

"ನೀನು ಯಾವಾಗಲೂ ಹೀಗೇ. ಚಿತ್ರ ಹಾಳುಮಾಡಿ ಬಿಟ್ಟೆ"—ಎಂದನು.

"ಕರೆದುದು ಕೇಳಿಸಲಿಲ್ಲವೆ? ಒಳ್ಳೆ ಶಿಷ್ಯ ನೀನು! ನಿನಗೆ ಕೆಲಸ ಕಲಿಸುವುದರ ಜೊತೆಗೆ, ಕರೆಯುವುದಕ್ಕೂ ನಾನೇ ಬರಬೇಕೋ?,—"

"ಆದರೆ..................."

"ಸಾಕು, ಸುಮ್ಮನಿರು! ತಮ್ಮನಾದರೇನಂತೆ? ಮನಸ್ಸಿಗೇ ಹಚ್ಚಬೇಡ. ಇಗೋ! ನೆನಪಿರಲಿ. ಕುಂಬಾರ ಕೆಲಸವಲ್ಲಿ ಎಲ್ಲಾ ಕಲಿತುಬಿಟ್ಟಿದ್ದೀ ಯೆಂದು ತಿಳಿಯಬೇಡ. ಇರಲಿ, ಈಗೇನು ಮಾಡುತ್ತಿದ್ದೆ?" (ಆ 'ಇನಾಮಲಿ'ನ ನಶ್ಯದ ಡಬ್ಬಿಯನ್ನು ನೋಡಿ),— "ಹ್ಞ! ಹ್ಞ!! ನಾನು ಹೇಳಿಕೊಡುವುದೊಂದು, ನೀನು ಮಾಡುವುದೊಂದು."

ಥಾಮಸ್ ಹೀಗೆ ಗೋಳಿಸಿದುದು ತೋರಿಕೆಗೆ ಮಾತ್ರ. ತಮ್ಮನು ತಯಾರಿಸಿ ಬಣ್ಣ ಹಾಕುತ್ತಿದ್ದ ನಶ್ಯದ ಡಬ್ಬಿಯನ್ನು ನೋಡಿ ಮನಸ್ಸಿನಲ್ಲೇ ಮೆಚ್ಚಿದನು. ಡಬ್ಬಿ ಚಿಕ್ಕದಾಗಿ ಮುದ್ದಾಗಿದ್ದಿತು. ಜೋಸಯನು ಅದರ ಮೇಲೆ ಬಿಡಿಸಿದ್ದ ನೀಲಿ, ಹಸುರು ಹೂಗಳು ಅಂದವಾಗಿದ್ದುವು. ಅಣ್ಣ ಥಾಮಸ್ ಪ್ರಸಿದ್ಧ ಕುಂಬಾರ. ಆ ಕೆಲಸದಲ್ಲಿ, ತನ್ನ ತಮ್ಮನು, ಅಷ್ಟು ಚಿಕ್ಕ ವಯಸ್ಸಿನಲ್ಲೂ, ಆಗಿನ ಕಾಲದ ಬಹು ಮಂದಿ ಕುಂಬಾರರಿಗಿಂತ ಒಳ್ಳೆಯ ಕಲೆಗಾರನಾಗಿದ್ದನೆಂದು ಅವನು ಅರಿತಿದ್ದನು. ಆದರೆ, ತಮ್ಮನನ್ನು ಖಂಡಿಸುತ್ತಿದ್ದುದು ಅವನ ಸ್ವಭಾವ. ಮುಂದುವರಿಯಬೇಕಾದ ಹುಡುಗನಿಗೆ ಹೊಗಳಿಕೆ ಹೊನ್ನಶೂಲವಾಗುವುದೆಂದು ಥಾಮಸನಿಗೆ ಗೊತ್ತು. ಅದರಿಂದ ಇನ್ನೊಂದು ಸಲ ಆ ಸಣ್ಣ ಕಲೆಗಾರನನ್ನು ಟೀಕಿಸಿದನು.—

"ಕೆಲಸಗಾರರೆಲ್ಲಾ ಹೀಗೆ ದಿನವೆಲ್ಲಾ ಬೊಂಬೆಗಳನ್ನು ಮಾಡುತ್ತ ಕುಳಿತಿದ್ದರೆ ವ್ಯಾಪಾರ ಬಹಳ ಚೆನ್ನಾಗಿ ಕುದುರುವುದು, ಅಲ್ಲವೆ? ಕೆಲಸದ ಕಾಲದಲ್ಲಿ ನನಗೆ ಎಲ್ಲರೂ ಒಂದೇ, 'ಅಯ್ಯೋ ಪಾಪ! ಚಕ್ರದ ಬಳಿ ಕುಳಿತು ಬಹಳ ಹೊತ್ತು ಕೆಲಸ ಮಾಡಿದರೆ ಕಾಲು ನೋಯುವುದೆಂದು'—ಕನಿಕರ

ತೋರಿಸಿದುದೇ ನನ್ನ ತಪ್ಪಾಯಿತು. ಸ್ವಲ್ಪ ವಿರಾಮ ದೊರೆತರೆ ಹೀಗೆ ಮನಸ್ಸೀ ಗೀಚಬೇಕೇನು ?''

''ನಾನು ....................''

''ಸಾಕು, ನಿನ್ನ ತಲೆ ಹರಟೆ... ... ....... ''

''ಕ್ಷಮಿಸು, ಅಣ್ಣಾ....... .... .''

''ಮುಚ್ಚು ಬಾಯಿ ! ಎದುರು ಮಾತನಾಡುವುದು ಬೇರೆ. ಆ ಹಸಿಯ ಗಡಿಗೆಗಳನ್ನು ಸುಡುವುದಕ್ಕೆ 'ಜಾಕ್'ಗೆ ಸಹಾಯ ಮಾಡು ಹೋಗು.''

ನಿರಾಶೆಯಿಂದ ನಿಟ್ಟುಸಿರು ಬಿಟ್ಟು ಜೋಸಯ ಒಲೆಯ ಕಡೆಗೆ ಕುಂಟಿ ಕೊಂಡು ಹೋದನು. ಚಿಕ್ಕಂದಿನಿಂದಲೂ ಅವನಿಗೆ ಒಂದು ಕಾಲು ಊನ.

ಹೀಗೆ ಅಣ್ಣ ಥಾಮಸನ ಕಾರ್ಖಾನೆಯಲ್ಲಿ ಕೆಲಸ ಮಾಡಿಕೊಂಡಿದ್ದ ಆ ಕುಂಟ ಹುಡುಗನೇ ಮುಂದೆ ಇಂಗ್ಲೆಂಡಿನಲ್ಲೂ ಮತ್ತು ವಿದೇಶಗಳಲ್ಲೂ ಪ್ರಸಿದ್ಧಿಪಡೆದ ಕುಶಲ ಕುಂಬಾರನಾದನು.

ಜೋಸಯನು ಚಿಕ್ಕವನಾಗಿದ್ದ ಕಾಲದಲ್ಲಿ ಕುಂಬಾರ ಕಲೆಯಲ್ಲಿ ಅನೇಕ ಬದಲಾವಣೆಗಳಾಗುತ್ತಿದ್ದುವು. ಹಿಂದೆ ಸ್ಟಾಫರ್ಡ್‌ಷೈರ್ ಪ್ರಾಂತದಲ್ಲಿ ಕುಂಬಾರರು ಮಣ್ಣಿನಿಂದ ಮಾತ್ರ ಪಾತ್ರೆಗಳನ್ನು ತಯಾರಿಸುತ್ತಿದ್ದರು. ತಯಾರಿಕೆಯ ರೀತಿಗಳಲ್ಲೇನೋ ಹಲವು ವಿಧಾನಗಳನ್ನು ಚತುರರಾದ ಕುಂಬಾರರು ಕಂಡುಹಿಡಿದಿದ್ದರು. ಮಣ್ಣಿನ ಪಾತ್ರೆಗಳಿಗೆ ಉಪ್ಪನ್ನು ಹಚ್ಚುವುದ ರಿಂದ ಮೆರುಗುಕೊಡುವುದು 1680 ರ ವೇಳೆಗೇ ತಿಳಿದಿದ್ದಿತು. ಅದನ್ನು ಕಂಡುಹಿಡಿದುದು ಹೇಗೆಂಬ ವಿಚಾರವಾಗಿ ಒಂದು ಸ್ವಾರಸ್ಯವಾದ ಕತೆ ಇದೆ:

1680 ನೆಯ ಇಸವಿಯಲ್ಲಿ ಒಂದು ದಿನ ಯೇಲ್ ಎಂಬವರ ಆಳು ಮಾಂಸವನ್ನು ಉಪ್ಪಿನಕಾಯಿ ಹಾಕುವುದಕ್ಕಾಗಿ, ಮಣ್ಣಿನ ಗಡಿಗೆಯಲ್ಲಿ ನೀರು ತುಂಬಿ ಉಪ್ಪನ್ನು ಬೆರೆಸಿ ಕುದಿಸುತ್ತಿದ್ದನು. ಅಕಸ್ಮಾತ್ ಗಡಿಗೆ ಉರುಳಿಬಿದ್ದಿತು. ಉಪ್ಪುನೀರು ಒಲೆಯೊಳಕ್ಕೆ ಹರಿಯಿತು. ಪಾತ್ರೆ ಕೆಂಪಗೆ ಕಾದಿದ್ದಿತು. ಅದರೊಳಗೆ ಏನೋ ನಯವಾಗಿ ಮಿರುಗುತ್ತಿತ್ತು. ಯೇಲ್ ರವರು ಒಂದು ಹೊಸ ಸಂಶೋಧನೆ ಆಯಿತೆಂದುಕೊಂಡರು. ಅಂದಿನಿಂದಲೂ ಮಣ್ಣಿನ ಪಾತ್ರೆಗಳಿಗೆ ಮೆರುಗು ಕೊಡುವುದಕ್ಕೆ ಪಾತ್ರೆಗಳನ್ನು ಸುಡುವ ಆವಿಗೆಯೊಳಗೆ ಉಪ್ಪನ್ನು ಚೆಲ್ಲುವುದು ಪ್ರಾರಂಭವಾಯಿತು.

ಪಿಂಗಾಣಿ ಪಾತ್ರೆಗಳು ಬೆಳ್ಳಗೆ ಮಿಂಚುವುದನ್ನು ಹೇಗೆ ಸಾಧಿಸಬಹುದೆಂಬುದನ್ನು ಕಂಡುಹಿಡಿದವನು ಆಸ್ಟ್ಬರಿ ಎಂಬ ಪ್ರಸಿದ್ಧ ಕುಂಬಾರ. ಅವನು ಅದನ್ನು ಕಂಡುಹಿಡಿದ ವಿಚಾರವಾಗಿಯೂ ಒಂದು ಕತೆ ಇದೆ:—

1720 ನೆಯ ವರ್ಷ. ಒಂದು ದಿನ ಆಸ್ಟ್ಬರಿ ಯಾವುದೋ ಕೆಲಸದ ಮೇಲೆ ಲಂಡನ್ನಿಗೆ ಕುದುರೆಯನ್ನೇರಿ ಹೊರಟಿದ್ದನು. ತನ್ನ ಕುದುರೆಗೆ ಕಣ್ಣು ಬೇನೆಯಾಗಿದೆಯೆಂಬ ವಿಚಾರ ಅವನಿಗೆ ದಾರಿಯಲ್ಲಿ ತಿಳಿಯಿತು. ಕೂಡಲೆ ಆಸ್ಟ್ಬರಿ ದಾರಿಯ ಪಕ್ಕದಲ್ಲಿದ್ದ ಒಂದು ಛತ್ರದಲ್ಲಿ ತಂಗಿ, 'ಕುದುರೆಯ ಕಣ್ಣು ಬೇನೆಯನ್ನು ನಿವಾರಿಸುವುದಕ್ಕೆ ಏನಾದರೂ ಉಪಾಯವಿದೆಯೆ'—ಎಂದು ಅಲ್ಲಿನ ಪರಿಚಾರಕನನ್ನು ಕೇಳಿದನು. ಪರಿಚಾರಕನು ಒಂದು ಬೆಣಚುಕಲ್ಲನ್ನು ಕೆಂಪಗೆ ಒಲೆಯಲ್ಲಿ ಕಾಯಿಸಿ ಅನಂತರ ಅದನ್ನು ತಣ್ಣೀರಿನಲ್ಲಿ ಹಾಕಿದನು. ಅದು ಚೂರು ಚೂರಾಯಿತು. ಆಮೇಲೆ ಪರಿಚಾರಕನು ಆ ಚೂರುಗಳನ್ನು ನುಣ್ಣನೆಯ ಪುಡಿಮಾಡಿ, ಪುಡಿಯನ್ನು ಕುದುರೆಯ ಕಣ್ಣಿನೊಳಕ್ಕೆ ಊದಿದನು. ಇಂಥ ಒರಟು ವೈದ್ಯ ಚಿಕಿತ್ಸೆಯನ್ನು ಅವನು ಯಾವ ವೈದ್ಯರಿಂದ ಅಥವಾ ವೈದ್ಯಗ್ರಂಥದಿಂದ ಕಲಿತಿದ್ದನೋ ನಮಗೆ ತಿಳಿಯದು! ಆ ಕುದುರೆಯ ಕಣ್ಣುಬೇನೆಯಾದರೂ ಎಷ್ಟರ ಮಟ್ಟಿಗೆ ವಾಸಿಯಾಯಿತೋ ದೇವರೇ ಬಲ್ಲ. ಅವೆಲ್ಲಾ ಹೇಗಾದರೂ ಇರಲಿ. ಮುಖ್ಯಾಂಶವೇನೆಂದರೆ, ಪರಿಚಾರಕನು ತಯಾರಿಸಿದ ಬೆಣಚುಕಲ್ಲಿನ ಪುಡಿ ಫಳಫಳನೆ ಹೊಳೆಯುತ್ತಿದ್ದುದನ್ನು ಕುದುರೆಯ ಮಾಲೀಕನಾದ ಆ ಆಸ್ಟ್ಬರಿ ಎಂಬ ಕುಂಬಾರನು ನೋಡಿ, ಅಂದಿನಿಂದ ತಾನು ಉಪಯೋಗಿಸುತ್ತಿದ್ದ ಮಣ್ಣಿನಲ್ಲಿ ಬೆಣಚುಕಲ್ಲಿನ ಪುಡಿಯನ್ನು ಸೇರಿಸುವುದಕ್ಕೆ ಪ್ರಾರಂಭಿಸಿದನು. ಈ ಹೊಸ ಪದ್ಧತಿ ಸ್ವಲ್ಪ ಕಾಲದಲ್ಲೇ ಸರ್ವಸಾಮಾನ್ಯವಾಯಿತು. ಆದರೆ ಇದರಿಂದ ಒಂದು ದೊಡ್ಡ ತೊಂದರೆಯೂ ಏರ್ಪಟ್ಟಿತು. ಬೆಣಚುಕಲ್ಲನ್ನು ಪುಡಿಮಾಡುವ ಕೆಲಸಗಾರರ ಶ್ವಾಸಕೋಶದಲ್ಲಿ ಆ ಪುಡಿ ಸೇರಿ ಅವರಿಗೆ ಭಯಂಕರ ಯಾತನೆ ಕೊಡುವ ರೋಗ ಹುಟ್ಟಿಕೊಂಡಿತು. ಕೆಲಸಗಾರರ ಶ್ವಾಸಕೋಶಗಳಿಗೆ ಬಾಧೆಯಾಗದಂತೆ ಏರ್ಪಡಿಸುವುದನ್ನು ಕಂಡುಹಿಡಿಯುವುದಕ್ಕೆ ಸ್ವಲ್ಪ ಕಾಲ ಬೇಕಾಯಿತು. ಅಲ್ಲಿಯವರೆಗೆ ಕೆಲಸಗಾರರು ಬಹಳ ಯಾತನೆ ಅನುಭವಿಸಿದರು.

ಇವೆಲ್ಲಾ ಜೋಸಯ ವೆಡ್ಜ್‌ವುಡ್ ಎಂಬ ಆ ಪ್ರತಿಭಾಶಾಲಿಯಾದ ಬಾಲಕನು ಅಭಿವೃದ್ಧಿಗೆ ಬರುತ್ತಿದ್ದ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಕುಂಬಾರ ಕಲೆಯಲ್ಲಿ ನಡೆಯುತ್ತಿದ್ದ ಬದಲಾವಣೆಗಳು. ಆಗಿನ ಸನ್ನಿವೇಶವೇ ಆ ಬಾಲಕನು ಅಭಿವೃದ್ಧಿಗೆ ಬರುವುದಕ್ಕೆ ಬಹುಮಟ್ಟಿಗೆ ಸಹಕಾರಿಯಾಯಿತು. ಅದಿರಲಿ, ಇನ್ನು ಜೋಸಯನ ಕತೆಯನ್ನು ಗಮನಿಸೋಣ.

ಜೋಸಯ ಹುಟ್ಟಿದುದು 1730 ನೆಯ ಇಸವಿಯಲ್ಲಿ. ಅವನ ತಂದೆಗೆ ಹದಿಮೂರು ಮಂದಿ ಮಕ್ಕಳು. ಅವರಲ್ಲೆಲ್ಲಾ ಜೋಸಯನೇ ಕಿರಿಯವನು. ಬರ್ಸ್ಲೆಂ ಅವನ ತವರೂರು. ಆ ಊರಿನ ಜನರೂ ಅಕ್ಕಪಕ್ಕದ ನಾಲ್ಕು ಊರಿನವರೂ ಪ್ರಾಯಶಃ ಎಲ್ಲರೂ ಕುಂಬಾರರೇ ಆಗಿದ್ದರು. ಜೋಸಯ ಎಂಟನೆಯ ವರ್ಷದ ವರೆಗೆ ಮಾತ್ರ ಶಾಲೆಗೆ ಹೋಗುತ್ತಿದ್ದನು. ಆ ವೇಳೆಗೆ ಅವನ ತಂದೆ ಮೃತನಾದನು. ಜೋಸಯ ಪಾಠಶಾಲೆಯನ್ನು ಬಿಟ್ಟುಬಿಡ ಬೇಕಾಗಿ ಬಂದಿತು. ಆದರೂ ಆ ಹುಡುಗನು ಆಸಕ್ತಿಯಿಂದ ತಾನೇ ಪಾಠ ಗಳನ್ನು ಓದಿಕೊಳ್ಳುತ್ತಲೂ, ಇತರರಿಂದ ಹೇಳಿಸಿಕೊಳ್ಳುತ್ತಲೂ ವಿದ್ಯೆ ಗಳಿಸುತ್ತಲೇ ಇದ್ದನು. ಕುಂಬಾರ ಕೆಲಸದಲ್ಲಿ ತಾನು ಬಹಳ ಮುಂದು ವರಿಯಬೇಕೆಂಬುದು ಆ ಹುಡುಗನ ಹಿರಿಯಾಸೆಯಾಗಿದ್ದಿತು.

ಹನ್ನೊಂದು ವರ್ಷ ವಯಸ್ಸಾಗುವ ವೇಳೆಗೆ ಸಿಡುಬಿನಿಂದ ಜೋಸಯ ಬಹಳ ಕಷ್ಟಪಟ್ಟನು. ಆಗಲೇ ಅವನಿಗೆ ಒಂದು ಕಾಲೂ ಊನವಾಗಿ ಆಜೀವಪರ್ಯಂತ ಅದು ಸರಿಯಾಗಲೇ ಇಲ್ಲ. ಇದರಿಂದ ಅವನಿಗೆ ಬಹಳ ದುಃಖವೂ ನಿರಾಶೆಯೂ ಆಯಿತು. ಏಕೆಂದರೆ ಕಾಲಿನ ನೋವಿನಿಂದಾಗಿ ಅವನು ಬಹಳ ಹೊತ್ತು ಚಕ್ರದ ಬಳಿ ಕುಳಿತು ಕುಂಬಾರ ಕೆಲಸಮಾಡುವು ದಕ್ಕೆ ಕಷ್ಟವಾಗುತ್ತಿತ್ತು. ಆ ಕಾರಣದಿಂದ ಜೋಸಯನು ಮಣ್ಣಿನ ಪಾತ್ರೆಗಳ ಮೇಲೆ ಅಂದವಾದ ಬಣ್ಣದ ಚಿತ್ರಗಳನ್ನು ಬರೆಯುವುದಕ್ಕೂ, ಪಾತ್ರೆಗಳು ಯಾವ ಯಾವ ಆಕಾರ, ರೂಪಗಳಲ್ಲಿರಬೇಕೆಂದು ಊಹಿಸುವುದಕ್ಕೂ ಪ್ರಾರಂಭಿಸಿದನು. ಬಣ್ಣಗಳನ್ನು ಬೇರೆ ಬೇರೆ ರೀತಿ ಮಿಶ್ರಮಾಡಿ ನೋಡು ವುದು, ಬೇರೆ ಬೇರೆ ಪ್ರಯೋಗಗಳಿಂದ ಹೊಸ ಹೊಸ ರಂಗುಗಳನ್ನು ತಯಾರಿಸುವುದು, ಮಣ್ಣನ್ನು ನಾನಾ ರೀತಿಗಳಲ್ಲಿ ಮಿಶ್ರಮಾಡುವುದು, ಇಂಥ ವಿಚಾರಗಳಲ್ಲಿ ಅವನಿಗೆ ಶ್ರದ್ಧೆ ಹುಟ್ಟಿತು. ಆ ಪರಿಶೋಧನೆಗಳನ್ನು

ಇನ್ನೂ ಚೆನ್ನಾಗಿ ಮಾಡಬೇಕೆಂದು ಅವನು ರಸಾಯನ ಶಾಸ್ತ್ರವನ್ನು ವ್ಯಾಸಂಗಮಾಡಿದನು.

ಹದಿನೈದು ವರ್ಷ ವಯಸ್ಸಾಗುವ ವೇಳೆಗೆ ಜೋಸಯನು ಕುಂಬಾರ ಕೆಲಸವನ್ನು ನಿಷ್ಠೆಯಿಂದ ಅಭ್ಯಾಸ ಮಾಡುವುದಕ್ಕೆ ಪ್ರಾರಂಭಿಸಿದನು. ಐದು ವರ್ಷಕಾಲ ಏಕರೀತಿಯಾಗಿ ಸತತ ಪ್ರಯತ್ನದಿಂದ ಅಭ್ಯಾಸವನ್ನು ಮುಂದುವರಿಸಿದನು. ಆದರೆ ಅವನು ಸದಾ ಪ್ರಯೋಗಗಳನ್ನೂ ಸಂಶೋಧನೆಗಳನ್ನೂ ನಡೆಯಿಸುತ್ತಿದ್ದುದು ಅವನ ಅಣ್ಣ ಥಾಮಸನಿಗೇಕೋ ಸರಿಬೀಳಲಿಲ್ಲ. ಆದುದರಿಂದ ಜೋಸಯನು ಬೇರೊಬ್ಬ ಕುಂಬಾರನ ಬಳಿ ಕೆಲಸಕ್ಕೆ ಸೇರಿದನು. ದುರದೃಷ್ಟದಿಂದ, ಆ ಹೊಸ ಯಜಮಾನನಿಗೆ ಪ್ರಯೋಗಗಳೆಂದರೆ ಇನ್ನೂ ಹೆಚ್ಚಿನ ಅಸಹನೆಯಿದ್ದಿತು. ಆದುದರಿಂದ ಆ ಕೆಲಸವನ್ನೂ ಬಿಟ್ಟು ಇಂಗ್ಲೆಂಡಿನ ಸುಪ್ರಸಿದ್ಧ ಕುಂಬಾರನೆನಿಸಿದ್ದ ಥಾಮಸ್ ವ್ಹೀಲ್ಡನ್ ಎಂಬಾತನಲ್ಲಿ ನೌಕರಿಗೆ ಸೇರಬೇಕೆಂದು ಜೋಸಯ ತೀರ್ಮಾನಿಸಿದನು.

ಒಂದು ದಿನ ವ್ಹೀಲ್ಡನ್ ತನ್ನ ಕಚೇರಿಯಲ್ಲಿ ಕಾಗದಪತ್ರಗಳನ್ನು ತಿರುವಿಹಾಕುತ್ತ ಕುಳಿತಿದ್ದನು. ಆಗ ಜೋಸಯನು ಆತನನ್ನು ಕಂಡು, ಆತನ ಮುಂದೆ ಮೇಜಿನ ಮೇಲೆ ಕೆಲವು ಪಿಂಗಾಣಿ ತಟ್ಟೆಗಳನ್ನಿಟ್ಟು : "ನೋಡಿ! ನಾನು ತಯಾರಿಸಿರುವ ಹೊಸ ಮಾದರಿಯ ತಟ್ಟೆಗಳಿವು. ಇವುಗಳ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ದಯೆಯಿಟ್ಟು ತಿಳಿಸಬೇಕು" ಎಂದನು.

ವ್ಹೀಲ್ಡನ್ ಅವುಗಳಲ್ಲಿ ಒಂದನ್ನು ತೆಗೆದುಕೊಂಡು ಸೂಕ್ಷ್ಮವಾಗಿ ಪರಿಶೀಲಿಸಿ: "ಮೆರುಗೇನೋ ಚೆನ್ನಾಗಿದೆ. ಇಂಥಾದ್ದನ್ನು ನಿಜವಾಗಿಯೂ ಇಂದಿನವರೆಗೆ ನೋಡಿಲ್ಲ. ಆದರೆ, ಒಳಗಡೆ ಬಣ್ಣ ಹೇಗಿರುವುದೋ ?" ಎಂದನು.

ಜೋಸಯ ವೆಡ್ಜ್‌ವುಡ್ ಆ ತಟ್ಟೆಗಳಲ್ಲಿ ಒಂದನ್ನು ಮೇಜಿನ ಮೇಲೆಯೇ ತಟ್ಟಿ ಒಡೆದು ತೋರಿಸಿದನು. ತಟ್ಟೆಯು ಒಳಗಡೆಯೂ ಕೆನೆಯ ಬಣ್ಣದಿಂದ ಅಂದವಾಗಿದ್ದಿತು. ವ್ಹೀಲ್ಡನ್ ತಲೆದೂಗಿ: "ಇಂಥ ಪಾತ್ರೆಗಳನ್ನು ತಯಾರಿಸಿದರೆ ಆ ಸಾಮಾನ್ಯ ಮಣ್ಣಿನ ಪಾತ್ರೆಗಳನ್ನು ಇನ್ನು ಮುಂದೆ ಯಾರು

ತಾನೇ ಕೇಳುತ್ತಾರೆ. ಭೇಷ್!" ಎಂದನು. ಹೊಸ ಮಾದರಿಯ ಪಾತ್ರೆಯ ವಿಚಾರವಾಗಿ ಮುಂದ ಅವರವರಿಗೆ ಮಾತುಕತೆ ಪ್ರಾರಂಭವಾಯಿತು.

ಜೋಸಯ: "ಮಣ್ಣಿನ ಪಾತ್ರೆ ತಯಾರಿಸಿ ಮಾರುವ ಯಾರೂ ವ್ಯಾಪಾರದಲ್ಲಿ ನಮ್ಮನ್ನು ಮೀರಿಸಲಾರರು. ಆ ವಿಚಾರದಲ್ಲಿ ಎಳ್ಳಷ್ಟೂ ಶಂಕೆಯಿಲ್ಲ. ಆದರೆ, ನನಗಿರುವ ಚಿಂತೆಯೇ ಬೇರೆ ಈಚೆಗೆ ಕಾರ್ನ್ ವಾಲ್ ಪ್ರಾಂತದಲ್ಲಿ ಪಿಂಗಾಣಿ ಮಣ್ಣು ದೊರೆಯುವುದಾಗಿ ತಿಳಿದು ಬಂದಿದೆ ಯಂತೆ. ಈ ಸುದ್ದಿ ನಿಜವಾಗಿದ್ದು, ಆ ಪಿಂಗಾಣಿಯೂ ಚೈನಾ ದೇಶದ ಪಿಂಗಾಣಿಯಷ್ಟೇ ಚೆನ್ನಾಗಿದ್ದರೆ, ಮುಂದೆ ಈ ಪ್ರಾಂತದ ಕೆಲಸಗಾರರ ಗತಿಯೇನು ? ಇಲ್ಲಿ ತಯಾರಾಗುವ ಮಣ್ಣಿನ ಸಾಮಾನುಗಳಿಗೆ ಗಿರಾಕಿ ದೊರೆಯದೆ ಹೋಗುವುದಲ್ಲಾ ?"

ವ್ಹೀಲ್ಡನ್: "ಸರಿ, ಅದಕ್ಕೇನು ಮಾಡೋಣ, ಹೇಳು!"

ಜೋಸಯ: "ಈಗ ನೋಡಿ! ಕಾಫಿ, ಟೀ, ಕುಡಿಯದೆ ಇರುವವರೇ ಯಾರೂ ಇಲ್ಲವಷ್ಟೆ ? ಅಂದಮೇಲೆ ತಟ್ಟೆ, ಬಟ್ಟಲುಗಳು ಎಲ್ಲರಿಗೂ ಆವಶ್ಯಕ. ಈಗ ನಾವು ಉಪ್ಪು ಚೆಲ್ಲಿ, ಮೆರುಗು ಕೊಟ್ಟು, ತಯಾರಿಸುವ ತಟ್ಟೆ ಬಟ್ಟಲುಗಳ ವ್ಯಾಪಾರ ಕಡಿಮೆ ಬಿದ್ದು, ಪಿಂಗಾಣಿ ಸಾಮಾನುಗಳ ವ್ಯಾಪಾರವೇ ಹೆಚ್ಚಾಗುವುದು ಖಂಡಿತ. ಅಲ್ಲದೆ ನಾವು ಈಗ ತಯಾರಿಸುತ್ತಿರುವ ಮೆರುಗಿನ ಸಾಮಾನುಗಳು ಬಿಸಿ ತಡೆಯುವುದೂ ಇಲ್ಲ, ಬಹಳ ದಿನ ಬಾಳಿಕೆ ಬರುವುದೂ ಇಲ್ಲ."

ವ್ಹೀಲ್ಡನ್: "ಒಂದು ವೇಳೆ ನೀನು ತೋರಿಸಿದಂಥ ಕೆನೆ ಬಣ್ಣದ ಸಾಮಾನುಗಳನ್ನೇ ಕೊಂಡುಕೊಳ್ಳಬಹುದಲ್ಲ ?"

ಜೋಸಯ: "ಸಂದೇಹವೇನು ? ಸಂಶೋಧನೆಗಳಿಂದ ಅದನ್ನು ಇನ್ನೂ ಉತ್ತಮವಾಗಿ ತಯಾರಿಸಬಹುದು. ಜೊತೆಗೆ ಪಿಂಗಾಣಿ ಸಾಮಾನಿನ ಬೆಲೆಯ ಅರ್ಧದಷ್ಟು ಬೆಲೆಗೆ ನಮ್ಮ ಸಾಮಾನುಗಳು ದೊರೆಯುವಂತೆ ತಯಾರಿಸಬೇಕು."

ವ್ಹೀಲ್ಡನ್ ಒಪ್ಪಿದನು. ಮುಂದೆ ಸ್ವಲ್ಪಕಾಲ ಅವರಿಬ್ಬರೂ ಒಟ್ಟಿಗೆ ಸಾಮಾನುಗಳನ್ನು ತಯಾರಿಸಿ ಮಾರುತ್ತಿದ್ದರು. ಆ ಕಾಲದಲ್ಲಿ ಸರಕನ್ನು

ಉತ್ತಮಪಡಿಸುವುದಕ್ಕೆ ಜೋಸಯ ಅನೇಕ ಪ್ರಯೋಗಗಳನ್ನು ನಡೆಯಿಸಿದನು. 1758 ರಲ್ಲಿ ಜೋಸಯ ತನ್ನ ಸ್ವಂತ ಕಾರ್ಖಾನೆಯನ್ನು ಪ್ರಾರಂಭಿಸಿದನು. ಬರ್ಸ್ಲೆಂ ನಗರದ "ಐವೀ ಹೌಸ್ ವರ್ಕ್ಸ್" ಎಂಬ ಆ ಕಾರ್ಖಾನೆಯನ್ನು ಅವನು ಬಾಡಿಗೆ ಕರಾರಿನ ಮೇರೆಗೆ ಕೊಂಡುಕೊಂಡಿದ್ದನು.

"ಐವೀ ಹೌಸ್ ಕಾರ್ಖಾನೆ" ಸ್ವಲ್ಪ ಕಾಲದಲ್ಲೇ ಬಹಳ ಪ್ರಸಿದ್ಧವಾಯಿತು. ಜೋಸಯ ವೆಡ್ಜ್‌ವುಡ್ ತನ್ನ ಕೆಲಸಗಾರರಲ್ಲಿ ಪ್ರತಿಯೊಬ್ಬನಿಗೂ ಪ್ರತ್ಯೇಕವಾದ ಒಂದು ಕಾರ್ಯಭಾಗವನ್ನು ಗೊತ್ತುಮಾಡುತ್ತಿದ್ದನು. ಅದರಿಂದ ಪ್ರತಿಯೊಬ್ಬ ಕೆಲಸಗಾರನೂ ತನ್ನ ಭಾಗದ ಕೆಲಸದಲ್ಲಿ ಕುಶಲನಾಗುತ್ತಿದ್ದನು. ಕಾರ್ಖಾನೆಯನ್ನು ಬಹಳ ಶುದ್ಧವಾಗಿಡಬೇಕೆಂಬುದು ಜೋಸಯನ ಕಟ್ಟಾಜ್ಞೆಯಾಗಿದ್ದಿತು. ಕೆಲಸ ನಡೆಯಿಸುವುದಕ್ಕೆ ಜೋಸಯನು ಹೊಸವಾದ ಕೆಲವು ಯಂತ್ರೋಪಕರಣಗಳನ್ನು ಕಂಡುಹಿಡಿದನು. ಆ ಕಾರ್ಖಾನೆಯಲ್ಲಿ ತಯಾರಾದ ಸಾಮಾನುಗಳು ಉತ್ಕೃಷ್ಟವಾಗಿದ್ದುವು. ಕುಶಲ ಕೆಲಸಕ್ಕೆ ಆ ಕಾರ್ಖಾನೆ ಹೆಸರುವಾಸಿ ಪಡೆಯಿತು.

ಕೆನೆಬಣ್ಣದ ಸಾಮಾನುಗಳನ್ನು ಉತ್ತಮಪಡಿಸುವುದಕ್ಕೆ ಜೋಸಯನು ಎಡಬಿಡದೆ ಪ್ರಯತ್ನಿಸಿದನು. 1762ರಲ್ಲಿ ಸುಂದರವಾದ ಚಿತ್ರಗಳನ್ನು ಬರೆದಿದ್ದ ಕೆಲವು ಸಾಮಾನುಗಳನ್ನು ಆತನು ರಾಣಿಗೆ ಕಾಣಿಕೆಯನ್ನಾಗಿ ಒಪ್ಪಿಸಿದನು. ರಾಜರಾಣಿಯರಿಗೆ ಬಹಳ ಸಂತೋಷವಾಯಿತು.

ಜೋಸಯನು ಬಹಳ ಗೌರವಸ್ಥನಾದ ದೊಡ್ಡಮನುಷ್ಯನಾಗಿ ಬಾಳಿದನು. ಅವನ ಕಾರ್ಖಾನೆಯಲ್ಲಿ ತಯಾರಾದ ಸುಂದರವಾದ, ಅಗ್ಗವಾದ ಸಾಮಾನುಗಳು ಬಹಳ ಬಳಕೆಗೆ ಬಂದವು. ಕಾಲಕ್ರಮದಲ್ಲಿ ಜೋಸಯನು ಸ್ವಂತ ವೆಚ್ಚದಿಂದ ಒಂದು ಕಾರ್ಖಾನೆಯನ್ನೂ, ತನ್ನ ಕೆಲಸಗಾರರ ವಾಸಕ್ಕೆ 'ಎಟ್ರೂರಿಯಾ' ಎಂಬ ಗ್ರಾಮವನ್ನೂ ಕಟ್ಟಿಸಿದನು. ಆಗ್ಗೆ ಇಟಲಿಯ 'ಎಟ್ರೂರಿಯಾ' ಪ್ರಾಂತದಲ್ಲಿ ನಡೆಯುತ್ತಿದ್ದ ಪ್ರಾಚೀನ ವಸ್ತು ಸಂಶೋಧನೆಗಳಲ್ಲಿ ದೊರೆತಿದ್ದ ಹಳೆಯ ಕಾಲದ ಮಣ್ಣಿನ ಪಾತ್ರೆಗಳನ್ನು ನೋಡಿ ಮೆಚ್ಚಿದ ಜೋಸಯನು ಆ ಗ್ರಾಮಕ್ಕೆ 'ಎಟ್ರೂರಿಯಾ' ಎಂದೇ ಹೆಸರಿಟ್ಟನು.

'ಜಾಸ್ಪರ್' ಎಂಬುದು ಒಂದು ವಿಶಿಷ್ಟ ರೀತಿಯ ಪಾತ್ರೆ. ಅದನ್ನು ತಯಾರಿಸುವ ವಿಧಾನವನ್ನು ಕಂಡುಹಿಡಿಯುವುದಕ್ಕೆ ಜೋಸಯ ವೆಡ್ಜ್‌ವುಡ್ ಬಹಳ ಕಾಲ ದುಡಿದನು. ಅಲ್ಲದೆ ಬೇರೆ ಬೇರೆ ಬಣ್ಣಗಳಲ್ಲಿದ್ದ 'ಎಟ್ರುಸ್ಕನ್' ಹೂಜಿಗಳೆಂಬ ಹೂಜಿಗಳನ್ನೂ ತಯಾರಿಸಿದನು. ಅವು ಬಹು ಪ್ರಸಿದ್ಧಿಹೊಂದಿದವು. ಅವುಗಳನ್ನು ಕೊಂಡುಕೊಳ್ಳುವುದಕ್ಕೆ ಬಹು ಮಂದಿ ಆತುರಪಡುತ್ತಿದ್ದರು. ಜೋಸಯನು ಲಂಡನಿನಲ್ಲಿ ಕೆಲವು ಪ್ರದರ್ಶನ ಶಾಲೆಗಳನ್ನು ಸ್ಥಾಪಿಸಿದನು. ಆ ಪ್ರದರ್ಶನ ಶಾಲೆಗಳಲ್ಲಿ ಮಣ್ಣಿನ ಪಾತ್ರೆಗಳನ್ನು ಮಾತ್ರವಲ್ಲದೆ ಪ್ರಸಿದ್ಧ ವ್ಯಕ್ತಿಗಳ ತಲೆಗಳ ಪ್ರತಿರೂಪಗಳನ್ನೂ, ಪ್ರಾಣಿಗಳ ಆಕಾರಗಳನ್ನೂ, ಕಾಫಿ, ಟೀ ಕುಡಿಯುವುದಕ್ಕೆ ಉಪಯೋಗಿಸುವ ತಟ್ಟೆ ಬಟ್ಟಲುಗಳನ್ನೂ, ಮೇಜುಗಳನ್ನೂ, ಹೂಜಿಗಳನ್ನೂ, ಹೂವಿನ ಗಿಡಗಳನ್ನೂ ಬೆಳೆಸುವ ಕುಂಡಗಳನ್ನೂ, ಮೇಣದಬತ್ತಿಗಳನ್ನಿಡುವ ಸ್ತಂಭಗಳನ್ನೂ, ನಶ್ಯದ ಡಬ್ಬಿಗಳನ್ನೂ, ಮಸಿಕುಡಿಕೆಗಳನ್ನೂ, ಉಷ್ಣಮಾಪಕ ಯಂತ್ರಗಳನ್ನೂ, ಇತರ ಅನೇಕ ವಸ್ತುಗಳನ್ನೂ ತಯಾರಿಸಿಟ್ಟನು. ಸಾವಿರಾರು ಮಂದಿ ಧನಿಕರು ಅವುಗಳನ್ನು ಕೊಂಡುಕೊಳ್ಳುವುದಕ್ಕೆ ಬಂದರು. ಇಂಗ್ಲೆಂಡಿನ ರಾಜರಾಣಿಯರೂ ಸಹ ಪ್ರದರ್ಶನಶಾಲೆಗಳಿಗೆ ಸಂದರ್ಶನವಿತ್ತರು. ಅಲ್ಲಿದ್ದ ಪ್ರದರ್ಶನದ ವಸ್ತುಗಳು ಯೂರೋಪಿನಲ್ಲೆಲ್ಲಾ ಪ್ರಸಿದ್ಧವಾದುವು. ಪ್ರದರ್ಶನ ವಸ್ತುಗಳ ಪಟ್ಟಿ ಹಲವು ಭಾಷೆಗಳಲ್ಲಿ ತಯಾರಾಯಿತು.

ಸ್ವಲ್ಪ ಕಾಲದ ಅನಂತರ ಒಂದು ವಿಶೇಷ ಸಂಗತಿ ಜರುಗಿತು. ರಷ್ಯಾ ದೇಶದ ಚಕ್ರವರ್ತಿನಿ ಕ್ಯಾತರೀನ್ ತನಗೆ ಊಟದ ತಟ್ಟೆ ಬಟ್ಟಲುಗಳನ್ನು ತಯಾರಿಸಿಕೊಡೆಂದು ಜೋಸಯನನ್ನು ಕೋರಿದಳು. ಜೋಸಯನು ಸಂತೋಷದಿಂದ ಒಪ್ಪಿದನು. ಪ್ರಪಂಚದಲ್ಲೇ ಅತ್ಯಂತ ಉತ್ಕೃಷ್ಟವಾದ, ಅತ್ಯಾಶ್ಚರ್ಯಕರವಾದ ಮಾದರಿಯ ಪಿಂಗಾಣಿ ತಟ್ಟೆ, ಬಟ್ಟಲುಗಳನ್ನು ತಯಾರಿಸಿಕೊಡುವುದಾಗಿ ಜೋಸಯನು ತೀರ್ಮಾನಿಸಿದನು. ಐವತ್ತು ಜನರು ಒಟ್ಟಿಗೆ ಊಟಕ್ಕೆ ಕುಳಿತುಕೊಂಡರೆ ಅವರೆಲ್ಲರಿಗೂ ಸಾಕಾಗುವಷ್ಟು ಉಪಕರಣಗಳನ್ನು ಆ ಜೋಡಣೆಯಲ್ಲಿ ಸೇರಿಸಿರಬೇಕೆಂದು ಜೋಸಯ ತೀರ್ಮಾನಿಸಿ ಕೆಲಸಕ್ಕೆ ಪ್ರಾರಂಭಿಸಿದನು. ಅದರಲ್ಲಿ ಒಟ್ಟು 952 ಸಾಮಾನುಗಳಿದ್ದುವು. ಆ ಸಾಮಾನುಗಳ ಮೇಲೆ ಪ್ರತಿಭಾವಂತ ಚಿತ್ರಗಾರರಿಂದ

ಚಿತ್ರಿಸಲ್ಪಟ್ಟ ಪ್ರಾಕೃತಿಕ ಸನ್ನಿವೇಶಗಳ 1282 ದೃಶ್ಯಗಳಿದ್ದುವು. ಆ ಸಾಮಾನುಗಳ ಬಣ್ಣ ಮಾಸಲು ಹಳದಿ; ಚಿತ್ರಗಳ ಬಣ್ಣ ಊದಾ. ತಟ್ಟೆಗಳ ಅಂಚುಗಳಲ್ಲಿ 'ಓಕ್' ಎಲೆಗಳ ಚಿತ್ರಗಳಿದ್ದುವು. ಪ್ರತಿಯೊಂದು ಸಾಮಾನಿನ ಮೇಲೂ ಒಂದು ಗುರಾಣಿಯ ಚಿತ್ರ; ಅದರ ಮೇಲೊಂದು ಕಪ್ಪೆಯ ಚಿತ್ರ. ರಾಣಿಯ ಅರಮನೆಗೆ 'ಲಾ ಗ್ರೆನೊಲಿಯರ್' ಎಂದರೆ 'ಮಂಡೂಕ ನಿವಾಸ'ವೆಂದು ಹೆಸರಿದ್ದಿತು. ಆ ಹೆಸರಿಗೆ ತಕ್ಕಂತೆ ಚಿತ್ರಗಳನ್ನು ಬರೆಯಿಸಿದ್ದನು. ಆ ತಟ್ಟೆ ಬಟ್ಟಲುಗಳನ್ನು ತಯಾರಿಸುವುದಕ್ಕೆ 3,040 ಪೌಂಡುಗಳ ವೆಚ್ಚ ಹಿಡಿಯಿತು. ಕ್ಯಾತರೀನ್ ರಾಣಿಗೆ ಬಹಳ ಸಂತೋಷವಾಯಿತು.

ಸ್ವಲ್ಪ ಕಾಲದಲ್ಲೇ ಕುಂಬಾರ ಕೆಲಸಕ್ಕೆ 'ಸ್ಟಾಫರ್ಡ್‌ಷೈರ್'ನ ಮಣ್ಣು ಒಳ್ಳೆಯದಲ್ಲವೆಂದು ಕುಂಬಾರರು ಇಂಗ್ಲೆಂಡಿನ ದಕ್ಷಿಣದಿಂದ ಒಳ್ಳೆಯ ಮಣ್ಣನ್ನು ತರಿಸಿಕೊಳ್ಳುವುದಕ್ಕೆ ಪ್ರಾರಂಭಿಸಿದರು. ಆದರೆ ಮಣ್ಣನ್ನು ಸಾಗಿಸಿಕೊಂಡು ಬರುವುದು ಕಷ್ಟಕರವಾಗಿದ್ದಿತು. ರೈಲುಗಾಡಿಯು ಇನ್ನೂ ನಿರ್ಮಿತವಾಗಿರಲಿಲ್ಲ. ರಸ್ತೆಗಳು ಹಳ್ಳಕೊಳ್ಳಾಗಿದ್ದುವು. ಆದುದರಿಂದ 'ಚೆಸ್ಟರ್' ಬಂದರಿನ ವರೆಗೆ ಮಣ್ಣನ್ನು ಹಡಗಿನಲ್ಲಿ ಸಾಗಿಸಿಕೊಂಡು ಬಂದು, ಅಲ್ಲಿಂದ ಮುಂದೆ ಕುದುರೆಗಳ ಮೇಲೆ ಚೀಲಗಳಲ್ಲಿ ಹೊರಿಸಿಕೊಂಡು ಬರಬೇಕಾಗಿದ್ದಿತು. ಆದರೆ ಹೀಗೆ ಸಾಗಿಸುವುದಕ್ಕೆ ಹೆಚ್ಚು ವೆಚ್ಚವಾಗುತ್ತಿದ್ದಿತು; ಕೆಲಸವು ಸಾವಕಾಶವಾಗುತ್ತಿದ್ದಿತು.

ಆ ಸಮಯಕ್ಕೆ ಡ್ಯೂಕ್ ಆಫ್ ಬ್ರಿಡ್ಜ್‌ವಾಟರ್ ಎಂಬ ಒಬ್ಬ ಕುಲೀನನು ವಾರ್ಸ್ಲೀ ಎಂಬಲ್ಲಿದ್ದ ಕಲ್ಲಿದ್ದಲ ಗಣಿಗಳಿಂದ ಮ್ಯಾಂಚೆಸ್ಟರ್ ಪಟ್ಟಣದ ವರೆಗೆ ಒಂದು ಕಾಲುವೆಯನ್ನು ತೋಡಿಸುತ್ತಿದ್ದ ವಿಷಯವು ಜೋಸಯನಿಗೆ ತಿಳಿಯಿತು. ಕಾಲುವೆಯನ್ನು ಮುಂದೆ ಮರ್ಸೀ ಮತ್ತು ಟ್ರೆಂಟ್ ನದಿಗಳ ವರೆಗೂ ಆ ಶ್ರೀಮಂತನು ತೋಡಿಸಬೇಕೆಂದಿದ್ದನೆಂದು ಸಹ ತಿಳಿಯಿತು. ಕೂಡಲೆ ಜೋಸಯನು ಆ ಶ್ರೀಮಂತನನ್ನು ಕಂಡು ಆ ಕಾಲುವೆಯು 'ಸ್ಟಾಫರ್ಡ್‌ಷೈರ್'ನ ಕುಂಬಾರ ಕೆಲಸದ ಕಾರ್ಖಾನೆಗಳ ಮಾರ್ಗವಾಗಿ ಹರಿದುಹೋಗುವಂತೆ ತೋಡಿಸುವುದಕ್ಕೆ ಆತನನ್ನು ಒಪ್ಪಿಸಿ ಏರ್ಪಾಟು

ಮಾಡಿಕೊಂಡನು. ಅದರಿಂದ ಮಣ್ಣಿನ ಸಾಗಾಟವೂ, ಸಾಮಾನುಗಳ ತಯಾರಿಕೆಯೂ ಸುಲಭವಾದವು.

ಜೋಸಯನಿಗೆ ಚಿಕ್ಕಂದಿನಿಂದಲೂ ಒಂದು ಕಾಲಿನಲ್ಲಿ ಬಾಧೆಯಿದ್ದಿತಷ್ಟೆ. ಅದನ್ನು ಶಸ್ತ್ರ ಚಿಕಿತ್ಸೆಗೊಳಪಡಿಸುವುದು ಸರಿಯೆಂದು ಕೊನೆಗೆ ತೀರ್ಮಾನಿಸಿದನು. ಹೀಗೆ ಜೋಸಯನು ಸ್ವಂತ ಇಚ್ಛೆಯಿಂದ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡನು. ಆದರೆ, ಹೆಳವನಾದ ಮೇಲೂ ಆತನು ಸೋಮಾರಿಯಾಗಿ ಕೂಡಲಿಲ್ಲ. ತನ್ನ ಅಮೂಲ್ಯವಾದ ಕಾಲವನ್ನು ವ್ಯಾಸಂಗದಲ್ಲೂ, ಸಂಶೋಧನೆಗಳಲ್ಲೂ ಕಳೆಯಲಾರಂಭಿಸಿದನು. ಆ ಎರಡು ಕೆಲಸಗಳೂ ಇಲ್ಲದಿರುವಾಗ ಆತನು ಕುಂಟಿಕೊಂಡೇ ಕಾರ್ಖಾನೆಯನ್ನೆಲ್ಲಾ ಸುತ್ತಿಬರುತ್ತಿದ್ದನು. ಆಗ ಯಾರಾದರೂ ಯಾವ ಸಾಮಾನನ್ನಾದರೂ ಅಸಮರ್ಪಕವಾಗಿ ತಯಾರಿಸುತ್ತಿದ್ದರೆ ಅದನ್ನು ತೋರಿಸಿ: 'ಜೋಸಯ ವೆಡ್ಜ್‌ವುಡ್‌ಗೆ ಇಂಥ ಕೆಲಸಗಳು ಬೇಕಿಲ್ಲ' ಎನ್ನುತ್ತಿದ್ದನು. ಕೆಲಸಗಾರರಿಗೆ ಅದರಿಂದ ಬೇಸರವಾಗುತ್ತಿರಲಿಲ್ಲ. ತಮ್ಮೆಲ್ಲರಿಗಿಂತ ಆತನು ಉತ್ತಮ ಕೆಲಸಗಾರನೆಂಬುದು ಅವರಿಗೆ ತಿಳಿದಿದ್ದಿತು.

ಜೋಸಯನು 1795ರಲ್ಲಿ ಮೃತನಾದನು. ಆಗ್ಗೆ ಅವನ ಬಳಿ 5 ಲಕ್ಷ ಪೌಂಡುಗಳಿದ್ದುವು. ಅಲ್ಲದೆ ಅವನ ಕಾರ್ಖಾನೆಗಳೂ ಇದ್ದುವು. ಆ ಕಾರ್ಖಾನೆಗಳು ಇಂದಿಗೂ ಚೆನ್ನಾಗಿ ಕೆಲಸ ನಡೆಯಿಸುತ್ತಿವೆ.

ಜೋಸಯನ ಹಿರಿಮೆಯೇನು ? ಆತನು ತನ್ನ ದೇಶದವರಿಗಾಗಿ ಸುಂದರವಾದ, ಅಗ್ಗವಾದ, ಪ್ರಯೋಜನಕರವಾದ ಸಾಮಾನುಗಳನ್ನು ತಯಾರಿಸಿ ಕೊಡುವುದರಲ್ಲಿ ತನ್ನ ಜೀವಮಾನವನ್ನೆಲ್ಲಾ ಕಳೆದನು. ಆ ಉತ್ತಮವಾದ ಸಾಮಗ್ರಿಗಳು ಎಲ್ಲ ದೇಶಗಳಲ್ಲೂ ಮಾರಾಟವಾದುದರಿಂದ ಅವನ ದೇಶದ ಸಂಪತ್ತು ಹೆಚ್ಚಿತು. ಅವನ ಕಾಲದಲ್ಲಿ 'ಸ್ಟಾಫರ್ಡ್‌ಷೈರ್' ಪ್ರಾಂತವು ಬಹಳ ಅಭಿವೃದ್ಧಿ ಹೊಂದಿತು. ಅವನು ತಯಾರಿಸಿದ ಕೆಲವು ಸಾಮಾನುಗಳು ಉತ್ತಮ ಕಲಾಕೃತಿಗಳಾಗಿವೆ; ಸಂತೋಷಕಾರಕವಾಗಿವೆ.

——




ಜೋಸಯ ವೆಡ್ಜ್‌ವುಡ್ ಹೆಳವನಾದ ಮೇಲೂ
ಸೋಮಾರಿಯಾಗಿ ಕೂಡಲಿಲ್ಲ.

# ಭಾಗ್ಯಚಕ್ರ

ವಸಂತಕಾಲದಲ್ಲಿ ಒಂದು ದಿನ ಪೂರ್ವಾಹ್ನ, ಇಂಗ್ಲೆಂಡಿನ 'ಲಂಕಾಷೈರ್' ಪ್ರಾಂತದ 'ಹೇವುಡ್' ಗ್ರಾಮಕ್ಕೆ ಸುಮಾರು ಮೂವತ್ತೈದು ವರ್ಷ ವಯಸ್ಸಿನವನೊಬ್ಬನು ಅಶ್ವಾರೂಢನಾಗಿ ಬಂದನು. ಆಗಂತುಕನು ಬಲಿಷ್ಠನಾಗಿ, ಸ್ವಲ್ಪ ಒರಟು ಮುಖಭಾವವುಳ್ಳವನಾಗಿದ್ದನು. ಆತನು ಒಮ್ಮೆ ಗ್ರಾಮದ ಗುಡಿಸಲುಗಳ ಕಡೆ ತೀಕ್ಷ್ಣದೃಷ್ಟಿಯಿಂದ ನೋಡಿದನು. ಗುಡಿಸಲುಗಳ ಮುಂದುಗಡೆ ಕೆಲವರು ಮುದುಕಿಯರೂ,ಸಣ್ಣ ಹುಡುಗಿಯರೂ ಕೈರಾಟೆಗಳಲ್ಲಿ ದಾರವನ್ನು ಸುತ್ತುತ್ತ ಕುಳಿತಿದ್ದರು. ಒಳಗಡೆ ಗಂಡಸರು ಮಗ್ಗಗಳಲ್ಲಿ ಬಟ್ಟೆ ನೇಯುತ್ತಿದ್ದರು. ಮಗ್ಗದ ಲಾಳಿಯನ್ನು ಅವರು ತಳ್ಳಿದಾಗ ಆಗುತ್ತಿದ್ದ ಶಬ್ದವು ಸ್ಪಷ್ಟವಾಗಿ ಕೇಳಿಬರುತ್ತಿದ್ದಿತು. ಅವರು ಹತ್ತಿ ಮತ್ತು ಉಣ್ಣೆಯ ನೂಲಿನ ಎಳೆಗಳನ್ನು ಜೋಡಿಸಿಕೊಂಡು ನೇಯುತ್ತಿದ್ದರು. ಹದಿನೆಂಟನೆಯ ಶತಾಬ್ದದ ಮಧ್ಯಕಾಲದಲ್ಲಿ ಇಂಗ್ಲೆಂಡಿನಲ್ಲಿ ದೊರೆಯುತ್ತಿದ್ದ ಹತ್ತಿಯೊಂದರಿಂದಲೇ ಬಟ್ಟೆ ನೇಯುವುದು ಸಾಧ್ಯವಿರಲಿಲ್ಲ. ಕೈರಾಟೆಗಳಲ್ಲಿ ತೆಗೆಯುತ್ತಿದ್ದ ಹತ್ತಿಯ ದಾರವು ಗಟ್ಟಿಯಾಗಿರುತ್ತಿರಲಿಲ್ಲ. ಆದುದರಿಂದ ಅಂಥ ದಾರದ ಜೊತೆಗೆ ಉಣ್ಣೆಯ ನೂಲನ್ನೂ ಜೋಡಿಸಿಕೊಂಡು ಬಟ್ಟೆ ನೇಯಬೇಕಾಗಿದ್ದಿತು.

ಪ್ರಯಾಣಿಕನು ಕುದುರೆಯಿಂದಿಳಿದು, ಅದರೊಡನೆ ಒಂದು ಗುಡಿಸಲ ಬಳಿಗೆ ಹೋದನು. ಗುಡಿಸಿಲ ಬಾಗಿಲ ಬಳಿ ಸಣ್ಣ ಹುಡುಗಿಯೊಬ್ಬಳು ಕುಳಿತಿದ್ದಳು. ಅವಳ ಹೊಂಬಣ್ಣದ ಕೂದಲು ಗುಂಗುರು ಗುಂಗುರಾಗಿ ಅವಳ ಭುಜದ ಮೇಲೆ ಬಿದ್ದಿದ್ದಿತು.

ಪ್ರಯಾಣಿಕನಿಗೆ ಆ ಗುಡಿಸಲಿನ ಜನರು ಪರಿಚಿತರಾಗಿದ್ದರೆಂದು ಕಾಣುತ್ತದೆ- ಅವನು ಕುದುರೆಯನ್ನು ಹೊರಗಡೆ ಕಟ್ಟಿ ಮನೆಯೊಳಕ್ಕೆ ಹೋದನು. ಒಳಗಡೆ ದೊಡ್ಡ ಅಂಗಳ. ಅಂಗಳದಲ್ಲಿ ಒಂದು ಭಾರಿ ಮಗ್ಗ.

ಮಗ್ಗದ ಬಳಿ ಮುದುಕನೊಬ್ಬನು ಕುಳಿತಿದ್ದನು. ಅವನು ಆ ಹುಡುಗಿಯ ತಂದೆ.

ವೃದ್ಧನು ಪ್ರಯಾಣಿಕನನ್ನು ಗುರುತಿಸಿ: "ಓಹೋ! ಆರ್ಕ್‌ರೈಟನೆ? ಏನಯ್ಯಾ, ಈಚೆಗೆ ಬಹಳ ಅಪರೂಪವಾಗಿಬಿಟ್ಟೆ? ಇರಲಿ, ಇಷ್ಟು ದಿನಕ್ಕಾದರೂ ಬಡವರ ಜ್ಞಾಪಕ ಬಂದಿತಲ್ಲ. ಬಹಳ ಸಂತೋಷ, ಬಾರಯ್ಯ! ಕುಳಿತುಕೊ" ಎಂದು ಹೇಳಿ, ತನ್ನ ಹೆಂಡತಿಯನ್ನು ಕರೆದು: "ಬೋಲ್ಟನ್ ನಗರದ ನಮ್ಮ ಸ್ನೇಹಿತನ ವಿಷಯ ಹೇಳಿಲ್ಲವೆ, ಮೇರಿ? ಈತನೇ ನಮ್ಮ ಗೆಳೆಯ ಆರ್ಕ್‌ರೈಟ್" ಎಂದನು.

ಪ್ರಯಾಣಿಕನು ಮುದುಕನೊಡನೆ: "ಏನಪ್ಪಾ ಜಾಕ್? ಎಲ್ಲಾ ಕ್ಷೇಮವೆ ತಾನೆ? ವ್ಯಾಪಾರ ಹೇಗಿದೆ? ಬಹಳ ಭರಾಟೆಯೋ?" ಎಂದನು.

ಮುದುಕನು ನಿಟ್ಟುಸಿರು ಬಿಟ್ಟು ಹೇಳಿದನು: "ವ್ಯಾಪಾರದ ವಿಷಯವೆ? ಅದೊಂದು ತಲೆಬಾಲವಿಲ್ಲದ ಗೋಳುಕತೆ. ಯಾವಾಗಲೂ ಏನಾದರೊಂದು ತೊಂದರೆ ಇದ್ದೇಇದೆ. ಹಿಂದೆ ಮಗ್ಗದವರು ದುಡಿದು ದುಡಿದು ಬೆಂಡಾದರೂ ಹೊಟ್ಟೆ ತುಂಬುವುದು ಕಷ್ಟವಾಗಿದ್ದಿತು. ಈಗಲೋ, ದಾರ ಸಿಕ್ಕಿದರಲ್ಲವೆ ನೇಯುವುದು? ಸಾಕಪ್ಪ, ಈ ಮಗ್ಗದ ಕೆಲಸ. ಒಟ್ಟಿಗೆ ಒಂದು ವಾರ ನೇಯುವಷ್ಟು ದಾರವೂ ಒಂದೇಸಲಕ್ಕೆ ಸಿಗುವಂತಿಲ್ಲ."

"ಇರಬಹುದು. ಆದರೆ, ಈಗಿನ ಮಗ್ಗಗಳಲ್ಲಿ ಬೇಗನೆ ನೇಯ್ಗೆ ಕೆಲಸ ನಡೆಯುತ್ತವಂತಲ್ಲಾ? ಅಂದಮೇಲೆ ಹಿಂದೆ ನೇಯುತ್ತಿದ್ದುದಕ್ಕಿಂತ ಹೆಚ್ಚು ಬಟ್ಟೆಯನ್ನು ನೇಯುತ್ತಿದ್ದೀರಲ್ಲವೆ?"

"ಹೌದು, ಆದರೆ ಸಂಪಾದನೆ ಮಾತ್ರ ಮೊದಲಿದ್ದುದರ ಅರ್ಧದಷ್ಟೇ. ಎರಡು ವರ್ಷಗಳ ಹಿಂದೆ ನಮ್ಮ ಧಣಿ ಬಂದು ಹೊಸ ನಮೂನೆಯ 'ಲಾಳಿ' ಕೊಟ್ಟುಹೋದರು. ಅದರ ಸಹಾಯದಿಂದ ಸುಲಭವಾಗಿ ನೇಯುವ ರೀತಿಯನ್ನೂ ತೋರಿಸಿಕೊಟ್ಟರು. ಕೆಲಸ ಹಗುರವಾಯಿತೆಂದು ಸಂಬಳ ಕಡಮೆ ಮಾಡಿಬಿಟ್ಟರು. ನೂಲಾದರೂ ಜಾಗ್ರತೆ ಸಿಗುವಂತಿದ್ದರೆ, ಹೆಚ್ಚು ದುಡಿದು ಹೊಟ್ಟೆ ಹೊರೆದುಕೊಳ್ಳಬಹುದಾಗಿದ್ದಿತು. ಆದರೆ ನಾವು ಎಷ್ಟು ಜಾಗ್ರತೆ ನೇಯುತ್ತೇವೋ, ಅಷ್ಟು ಬೇಗನೆ ರಾಟೆಯವರು ನೂಲು ತೆಗೆದುಕೊಡುತ್ತಿಲ್ಲ."

"ಹಾಗೇನು ? ಅಂದಮೇಲೆ ಈಗಿರುವ ಸಾದಾ ಚರಕಕ್ಕೆ ಬದಲಾಗಿ ಇನ್ನುಮೇಲೆ ಹತ್ತು ಹನ್ನೆರಡು ಕದಿರುಗಳಿರುವ ಭಾರಿ ರಾಟೆಯೇ ಬೇಕಾಗುತ್ತದೆ, ಅಲ್ಲವೆ?"

"ಸರಿ ಎಲ್ಲಾ ಆಯಿತು, ಇನ್ನು ಅದೊಂದು ಬೇರೆ! ಅದು ಬಂದರೆ ಸಣ್ಣ ಚರಕದವರ ಗತಿ ? ಒಂದೇ ರಾಟೆಯಲ್ಲಿ ಹೆಚ್ಚು ದಾರ ತೆಗೆದರೆ ಎಷ್ಟು ಜನ ಸಣ್ಣ ಚರಕದವರಿಗೆ ಕೆಲಸವಿಲ್ಲದೆ ಹೋಗುತ್ತೋ! ದೊಡ್ಡ ರಾಟೆ ಬಳಕೆಗೆ ಬಂದರೆ, ನನ್ನ ಹೆಂಡತಿಯೂ, ಮಗಳೂ ಕೆಲಸವಿಲ್ಲದೆ ಕುಳಿತಿರಬೇಕಾಗುತ್ತದೆ. ದಾರ ತೆಗೆಯುವುದು ಸುಲಭವಾಗುವುದರಿಂದ ದಾರದ ಬೆಲೆ ಇಳಿದು ಹೋಗಬಹುದು. ಹತ್ತಿ ಬೆಳೆಯುವವರು ಹೊಸ ರಾಟೆ ಇರುವವರಿಗೆ ಮಾತ್ರ ಹತ್ತಿಯನ್ನು ಮಾರಬಹುದು. ಉಳಿದವರ ಗತಿ?"

"ಅದೇನೋ ! ಬ್ಲಾಕ್‌ಬರ್ನ್ ಗ್ರಾಮದಲ್ಲಿ ಹಾರ್‌ಗ್ರೀವ್ಸ್ ಎಂಬುವನಿದ್ದಾನಂತೆ. ಅವನು ಎಂಟು ಕದಿರುಗಳಿರುವ ರಾಟೆಯನ್ನು ತಯಾರಿಸಿದ್ದಾನಂತೆ."

ಮುದುಕನಿಗೆ ಕೋಪ ಬಂದು ಹೇಳಿದ: "ಏನಾಯಿತು ಗೊತ್ತೋ ಅವನಿಗೆ? ಆ ಊರಿನ ನೂಲುವವರೂ ನೇಯ್ಗೆಯವರೂ ಅವನ ರಾಟೆಯನ್ನು ಚೂರುಚೂರುಮಾಡಿ ಅವನ ಮನೆಗೆ ಬೆಂಕಿ ಹಚ್ಚಿಬಿಟ್ಟರು. ನಮಗೆ ಈ ಹೊಸ ಶೋಧನೆಗಳೊಂದೂ ಬೇಡ. ಜನ ಕಷ್ಟಪಟ್ಟು ದುಡಿದು ಪ್ರಾಮಾಣಿಕರಾಗಿ ಜೀವನ ಮಾಡುವುದೇ ನ್ಯಾಯ. ಈ ಪ್ರಯೋಗ, ಉಪಾಯ, ತಂತ್ರ–ಇವೆಲ್ಲಾ ಏಕೆ?"

ಹೀಗೆಯೇ ಸ್ವಲ್ಪಹೊತ್ತು ಮಾತನಾಡುತ್ತಿದ್ದು ಆಮೇಲೆ ಆರ್ಕ್‌ರೈಟ ತನ್ನ ಊರಿಗೆ ಹಿಂದಿರುಗಿದನು.

ದಾರಿಯುದ್ದಕ್ಕೂ ಅವನಿಗೆ ಯೋಚನೆ. ಭಾರಿ ರಾಟೆ ತಯಾರಿಸುವವನಿಗೆ ಭಾಗ್ಯದೆಶೆ ಒದಗುವುದೆಂದು ಅವನ ಮನಸ್ಸಿಗೆ ಖಚಿತವಾಗಿ ಕಾಣುತ್ತಿದ್ದಿತು. ಹೊಸಬಗೆಯ 'ಲಾಳಿ'ಯಿಂದ ನೇಯುವುದು ಸುಲಭವಾದ ಮೇಲೆ, ಹೊಸಬಗೆಯ ರಾಟೆ ಆವಶ್ಯಕವಾಗಿಬಿಟ್ಟಿದ್ದಿತು. ಹೊಸಲಾಳಿಯಿಂದ ನೇಯುವ ಕೆಲಸವು ಬಹು ಬೇಗನೆ ಸಾಗುತ್ತಿದ್ದುದರಿಂದ ನಾಲ್ಕು ಜನ ನೂಲುವವರು ಒಬ್ಬ ನೇಯ್ಗೆಯವನಿಗೆ ದಾರ ಒದಗಿಸುವುದೇ ಪ್ರಯಾಸಕರವಾಗಿದ್ದಿತು.

ಐದು ವರ್ಷಗಳಿಂದ ಆರ್ಕ್‌ರೈಟ್ ಆ ಪ್ರಾಂತದಲ್ಲೆಲ್ಲಾ ತಿರುಗಾಡಿದ್ದನು. ಅವನು ಹೋದ ಸ್ಥಳಗಳಲ್ಲೆಲ್ಲಾ ಎಲ್ಲರ ಬಾಯಲ್ಲೂ ಒಂದೇ ಮಾತು: ಸಾಕಾದಷ್ಟು ದಾರ ಸಿಗದೆ ನೇಯ್ಗೆಯವರಿಗೆ ಕೈ ಬಿಡುವಾಗಿದೆಯೆಂದು ಎಲ್ಲರೂ ಹೇಳುತ್ತಿದ್ದರು. ಪ್ರತಿಯೊಬ್ಬರೂ ಇನ್ನೊಂದು ವಿಷಯವನ್ನೂ ಮುಖ್ಯವಾಗಿ ಚರ್ಚಿಸುತ್ತಿದ್ದರು. ಹಾರ್‌ಗ್ರೀವ್ಸ್ ಮತ್ತು ಅವನ ಹೊಸ ರಾಟೆ! ತಾನೂ ಕೆಲವು ತಿಂಗಳುಗಳಿಂದ ಹೊಸಬಗೆಯ ರಾಟೆಯನ್ನು ತಯಾರಿಸಬೇಕೆಂದು ಯೋಚಿಸುತಿದ್ದನು. ಈಗ ಹಾರ್‌ಗ್ರೀವ್ಸ್ ಹೊಸ ರಾಟೆಯನ್ನು ಕಂಡು ಹಿಡಿದಿದ್ದಾನೆಂದು ಜನರು ಹೇಳುತ್ತಿದ್ದರು. ಅವನು ತನಗೆ ಮೊದಲೇ ಹೊಸರಾಟೆಯನ್ನು ಕಂಡುಹಿಡಿದು ಬಿಟ್ಟಿದ್ದಾನೋ?— ಇವೇ ಮೊದಲಾದ ಯೋಚನೆಗಳಲ್ಲಿ ಮಗ್ನನಾಗಿ ಆರ್ಕ್‌ರೈಟ್ ಊರಿಗೆ ಹಿಂದಿರುಗಿದನು.

ಆರ್ಕ್‌ರೈಟ್ ವೃತ್ತಿಯಲ್ಲಿ ಕ್ಷೌರಿಕ. ಊರಿಗೆ ಹಿಂದಿರುಗಿದ ದಿನ ಸಾಯಂಕಾಲ ಅವನು ತನ್ನ ಅಂಗಡಿಯಲ್ಲಿ ಕುಳಿತಿದ್ದನು. ಅಂಗಡಿಯ ಕಿಟಕಿಗಳ ತುಂಬಾ ಖಾಲಿ ಸೀಸೆಗಳೂ, ಔಷಧಿ ತುಂಬಿದ ಸೀಸೆಗಳೂ ಅಡಕ ವಾಗಿದ್ದುವು ಆ ಕಾಲದಲ್ಲಿ ಸಣ್ಣಪುಟ್ಟ ಖಾಯಿಲೆಗಳಿಗೆ ಕ್ಷೌರಿಕರೂ ಔಷಧಿ ಕೊಡುವ ಪರಿಪಾಠವಿದ್ದಿತು. ಕಿಟಕಿಗಳ ತುಂಬ ಸೀಸೆಗಳಿದ್ದುದರಿಂದ ಅಂಗಡಿ ಯೊಳಗೆ ಬೆಳಕು ಬೀಳದೆ ಮಂಕು ಕವಿದಿದ್ದಿತು.

ಚಳಿಯಿಂದ ಆರ್ಕ್‌ರೈಟ್ ಅಂಗಡಿಯ ಮೂಲೆಯಲ್ಲಿದ್ದ ಬೆಂಕಿಯ ಮುಂದೆ ಕುಳಿತು ಅದರ ಮಂದ ಪ್ರಕಾಶದಲ್ಲಿ ದಿನಪತ್ರಿಕೆಯೊಂದನ್ನು ಓದು ತ್ತಿದ್ದನು. ಪತ್ರಿಕೆಗೆ ತಾನು ಕೊಟ್ಟಿದ್ದ ಜಾಹಿರಾತು ಬಂದಿದ್ದುದನ್ನು ನೋಡಿ ಅವನಿಗೆ ಆನಂದವಾಯಿತು. ಅವನ ಅಂಗಡಿಯ ಹಿಂದೆಯೇ ಮನೆ. ಹೆಂಡತಿ ಯನ್ನು ಕರೆದು ಆರ್ಕ್‌ರೈಟ್ ಹೆಮ್ಮೆಯಿಂದ ತನ್ನ ಜಾಹಿರಾತನ್ನು ತೋರಿಸಿದನು.

ಆ ಹೆಂಗಸು, "ನನಗೆ ಓದುವುದಕ್ಕೆ ಬರುವುದಿಲ್ಲವೆಂದು ನಿಮಗೆ ತಿಳಿದಿದೆ. ಅದನ್ನು ತೋರಿಸಿ ಪ್ರಯೋಜನವೇನು? ಜಾಹಿರಾತುಗಳಿಗಾಗಿ ಹಣ ಏಕೆ ವೆಚ್ಚಮಾಡುತ್ತೀರೋ ಕಾಣೆ. ನಿದ್ದೆಗೆಟ್ಟು, ಹೊಸರಾಟೆ ಕಂಡು

ಹಿಡಿಯುವ ಹಗರಣ ಬೇರೆ. ಈ ಶ್ರಮದಿಂದೆಲ್ಲಾ ಪ್ರಯೋಜನವೇನು ?''
ಎಂದಳು.

ಆರ್ಕ್‌ರೈಟ್ : ''ಏನಾದರೊಂದು ರೀತಿ ದುಡಿಯದೆ ಪ್ರಯೋಜನವಿಲ್ಲ. ಏನಾದರೂ ಹೊಸ ವಿಷಯ ಕಂಡುಹಿಡಿಯಬೇಕು. ಇಲ್ಲವೆ, ಒಂದು ಹೊಸ ವಿಧಾನದಲ್ಲಾದರೂ ಕೆಲಸ ಮಾಡಬೇಕು. ಅನ್ಯಥಾ ಮುಂದುವರಿಯುವುದು ಸಾಧ್ಯವೇ ಇಲ್ಲ. ಹೊಸ ಮಾರ್ಗದಲ್ಲಿ ಕೆಲಸ ಮಾಡುವಾಗ ತೊಂದರೆ ಬಂದರೂ ಚಿಂತೆಯಿಲ್ಲ ನಾಳೆಯಿಂದ ಕ್ಷೌರ ಮಾಡುವುದಕ್ಕೆ ತೆಗೆದುಕೊಳ್ಳುವ ಹಣವನ್ನು ಅರ್ಧದಷ್ಟು ಕಡಿಮೆ ಮಾಡಿಬಿಡುತ್ತೇನೆ. ಎಲ್ಲರೂ ನನ್ನ ಅಂಗಡಿಗೇ ಬರಬೇಕು. ನೋಡೋಣ ವಂತೆ.''

ಹೆಂಗಸು ಏನನ್ನೋ ಹೇಳುವುದರಲ್ಲಿದ್ದಳು. ಅಷ್ಟರಲ್ಲಿ ಅಂಗಡಿಯ ಬಾಗಿಲನ್ನು ತೆಗೆದುಕೊಂಡು ಒಬ್ಬ ಮನುಷ್ಯನು ಒಳಕ್ಕೆ ಬಂದನು.

ಒಳಗೆ ಬಂದವನು ಅಲ್ಲಿದ್ದ 'ಕುರ್ಚಿ'ಯ ಮೇಲೆ ಧೊಪ್ಪನೆ ಕುಳಿತು : ''ಕ್ಷೌರ ಮಾಡಿಸಿಕೊಳ್ಳಬೇಕು. 'ಚರ್ಚಿ'ನ ಗಡಿಯಾರ ಸರಿಮಾಡುತ್ತಿದ್ದೆ. ಬಹಳ ಚಳಿ. ಅದಕ್ಕೇ ಒಂದಿಷ್ಟು ಸಾರಾಯಿ ಕುಡಿದು ಬಂದೆ''— ಎನ್ನುತ್ತಾ ತುಟಿಗಳನ್ನು ಕೈಯಿಂದ ಒರಸಿಕೊಂಡನು.

ಕುಡುಕನು ಮನಸ್ಸಿಗೆ ಮಾತನಾಡುತ್ತಲೇ ಇದ್ದನು. ಆರ್ಕ್‌ರೈಟ್ ಅವನ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಮೌನವಾಗಿ ಕ್ಷೌರಮಾಡುತ್ತಿದ್ದನು. ಆಗಲೂ ಹೊಸ ರಾಟೆಯನ್ನು ಕಂಡುಹಿಡಿಯುವ ವಿಚಾರವನ್ನು ಅವನು ಚಿಂತಿಸುತ್ತಿದ್ದನು.

ಕ್ಷೌರ ಮಾಡಿಸಿಕೊಳ್ಳುತ್ತಿದ್ದವನು ಮಾತನಾಡುವುದನ್ನು ನಿಲ್ಲಿಸಲೇ ಇಲ್ಲ. ಒಂದೊಂದು ಮಾತು ಆರ್ಕ್‌ರೈಟನ ಕಿವಿಯೊಳಕ್ಕೆ ಹೊಕ್ಕು ಮನಸ್ಸನ್ನು ಮುಟ್ಟುತ್ತಿದ್ದಿತು ; ''ಗಡಿಯಾರವನ್ನು ಸರಿಪಡಿಸುವ ಕೆಲಸವು ಕಷ್ಟಕರ. ಜನ ಇದಕ್ಕೆ ಬೆಲೆ ಕೊಡುವುದೂ ಅಷ್ಟರಲ್ಲೇ ಇದೆ. ಇರಲಿ, ಈ 'ಜಾನ್' ಕೇ ಹೀಗೇ ಇರುತ್ತಾನೇನು ? ಹೊಸರಾಟೆ ಕಂಡು ಹಿಡಿಯುತ್ತೇನೆ. ಆಗಲ್ಲವೆ ನನ್ನ ಶಕ್ತಿ ತಿಳಿಯುವುದು ? ಹೈಸ್ ಜೊತೆಗೆ ಸೇರಿ,

ಕಂಡು ಹಿಡಿಯುವ ರಾಟೆ ! ಲಟ್ಟಣಿಗೆಗಳನ್ನು ಜೋಡಿಸಿರುತ್ತೆ. ದೊಡ್ಡ ರಹಸ್ಯ: ಯಾರಿಗೂ ಹೇಳಬಾರದು................"

ಹೊಸ ರಾಟೆಯ ಮಾತು ಬಂದಾಗ ಆರ್ಕ್‌ರೈಟ್ ಗಮನಕೊಟ್ಟು ಕೇಳುವುದಕ್ಕೆ ಪ್ರಾರಂಭಿಸಿದನು. ಮತ್ತು "ಏನಂದೆ? ಹೊಸರಾಟೆಯ ವಿಚಾರ ಏನು ?"—ಎಂದು ಕೇಳಿದನು.

ಕುಡುಕನು ಮೂಗಿನ ಮೇಲೆ ಬೆರಳಿಟ್ಟುಕೊಂಡು: "ಅದನ್ನು ಕೇಳ ಬಾರದು ; ಗುಟ್ಟಿನ ವಿಚಾರ !" ಎಂದುಬಿಟ್ಟನು. ಹೆಚ್ಚಿಗೆ ಒಂದು ಮಾತನ್ನೂ ಅವನಿಂದ ಹೊರಡಿಸುವುದಕ್ಕೆ ಆಗಲಿಲ್ಲ.

ಆ ರಾತ್ರಿಯೆಲ್ಲಾ ಆರ್ಕ್‌ರೈಟನಿಗೆ ನಿದ್ದೆ ಹತ್ತಲಿಲ್ಲ. ಬೆಂಕಿಯ ಮುಂದೆ ಕುಳಿತು ಹೊಸರಾಟೆಯ ವಿಚಾರವನ್ನೇ ಯೋಚಿಸುತ್ತಿದ್ದನು.

"ಲಟ್ಟಣಿಗೆಗಳ ಸಹಾಯದಿಂದ ತಿರುಗುವ ರಾಟೆಯೆ ? ಅದನ್ನು ಹೇಗೆ ತಯಾರಿಸಲಿ ? ಹೇಗಾದರೂ ಆಗಲಿ. ಒಂದು ಮುಖ್ಯ ವಿಷಯ ವಂತೂ ತಿಳಿದಹಾಗಾಯಿತು, ನೋಡೋಣ..........." ಇತ್ಯಾದಿಯಾಗಿ ಅವನು ರಾತ್ರಿಯೆಲ್ಲಾ ಯೋಚಿಸುತ್ತಿದ್ದನು.

ಬಹು ದಿನಗಳಿಂದ ಅನೇಕ ಸಲ ಹೊಸರಾಟೆಯ ವಿಚಾರವು ಮನಸ್ಸಿಗೆ ಬಂದಾಗ, ಲಟ್ಟಣಿಗೆಗಳನ್ನು ಉಪಯೋಗಿಸಿ ಅದನ್ನು ತಯಾರಿಸಬಹುದೆಂದು ಆರ್ಕ್‌ರೈಟನೇ ಸ್ವತಃ ಯೋಚಿಸಿದ್ದನು. ಒಂದು ವರ್ಷಕ್ಕೆ ಹಿಂದೆ ತಾನು ಕಂಡಿದ್ದ ದೃಶ್ಯವೊಂದು ಈಗ ಹಠಾತ್ತನೆ ಜ್ಞಾಪಕಕ್ಕೆ ಬಂದಿತು. ಆಗ ತಾನು ಕಂಡಿದ್ದ ದೃಶ್ಯದಲ್ಲಿ, ಕೆಂಪಗೆ ಕಾದು ಮೆತುವಾಗಿದ್ದ ಕಬ್ಬಿಣವನ್ನು ಒಬ್ಬ ಕಮ್ಮಾರನು ಎರಡು ಕಬ್ಬಿಣದ ಗುಂಡುಗಳ ಮಧ್ಯೆ ಅದುಮಿ ಉದ್ದವಾಗಿ ದಾರದಂತೆ ಎಳೆದಿದ್ದುದನ್ನು ಆರ್ಕ್‌ರೈಟ್ ಮರೆತಿರಲಿಲ್ಲ. ಅದೇ ರೀತಿ ವೇಗವಾಗಿ ಸುತ್ತುತ್ತಿರುವ ಲೋಹದ ಗುಂಡುಗಳ ಮಧ್ಯೆ ಹತ್ತಿಯು ಹಾದು ಹೋಗುವಂತೆ ಯಂತ್ರಚಲನೆಯನ್ನು ಏರ್ಪಡಿಸಿದರೆ, ಗಟ್ಟಿಯಾದ ದಾರದ ಎಳೆ ಏಕೆ ಬರಬಾರದು ?"

—ಬಹಳ ಯೋಚಿಸಿದ ಮೇಲೆ, ಆ ಜಾನ್ ಕೇ ಎಂಬವನಿಂದಲೇ ಇನ್ನೂ ಹೆಚ್ಚು ವಿಷಯಗಳನ್ನು ತಿಳಿದು ಬರಬೇಕೆಂದು ಆರ್ಕ್‌ರೈಟ್ ನಿರ್ಧರಿಸಿದನು. ಜಾನ್‌ಕೇ ತಾನು ವಾರಿಂಗ್ಟನ್ ಗ್ರಾಮದವನೆಂದು ಹೇಳಿ

ಕೊಂಡಿದ್ದ ವಿಚಾರವು ಜ್ಞಾಪಕಕ್ಕೆ ಬಂದಿತು. ಕೂಡಲೇ ಆರ್ಕ್‌ರೈಟನು ಒಳ್ಳೆಯ ಉಡುಪನ್ನು ಧರಿಸಿ, ಸ್ವಲ್ಪ ಹಣವನ್ನು ತೆಗೆದುಕೊಂಡುಹೋಗಿ, ವಾರಿಂಗ್ಟನ್ನಿನಲ್ಲಿ ಜಾರ್ಕೇ ಎಂಬವನ ಅಂಗಡಿಯನ್ನು ಬಹಳ ಹುಡುಕಿದನು. ಅಂಗಡಿ ಸಿಕ್ಕಿತು. ಬಾಗಿಲು ಮುಚ್ಚಿದ್ದಿತು. ಆದರೆ ಬೀಗ ಹಾಕಿರಲಿಲ್ಲ. ಆರ್ಕ್‌ರೈಟ್ ಬಾಗಿಲನ್ನು ತಳ್ಳಿ ಒಳಕ್ಕೆ ಹೋದನು. ಅಲ್ಲಿ ಜಾರ್ಕೇ ಸುತ್ತಲೂ ಗಡಿಯಾರಗಳನ್ನು ಇಟ್ಟುಕೊಂಡು ಕುಳಿತಿದ್ದನು. ಆರ್ಕ್‌ರೈಟ ನನ್ನು ನೋಡಿ ಅವನು: "ನನ್ನಿಂದ ಏನಾದರೂ ಕೆಲಸವಾಗಬೇಕಾಗಿದೆಯೆ?" ಎಂದನು.

"ನಾನು ರಿಚರ್ಡ್ ಆರ್ಕ್‌ರೈಟ್. ಬೋಲ್ಟನ್ ನನ್ನೂರು"—ಆರ್ಕ್‌ರೈಟ್ ಗಾಂಭೀರ್ಯದಿಂದ ಮಾತನಾಡಿದ. ತನ್ನ ಧ್ವನಿಯಲ್ಲಿ ಗಡುಸಿರಬೇಕು, ತಾನು ದೊಡ್ಡ ಮನುಷ್ಯನೆಂದು ಜಾರ್ಕೇ ತಿಳಿಯಬೇಕು, ಎಂಬುದು ಅವನ ಉದ್ದೇಶವಾಗಿದ್ದಿತು.

"ನನಗೆ ರಾಟೆಗಳೆಂದರೆ ಪ್ರಾಣ. ಅವುಗಳ ವಿಚಾರ ನಿಮ್ಮನ್ನು ಕೇಳಿದರೆ ತಿಳಿಯುತ್ತದೆಂದು ಯಾರೋ ಅಂದರು"—

ಮಾತನಾಡುತ್ತಿದ್ದಾಗ ಆರ್ಕ್‌ರೈಟ್ ಜಾರ್ಕೇ ಮುಖವನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದನು. ಆದರೆ, ಜಾರ್ಕೇಗೆ ತನ್ನ ಪರಿಚಯ ಜ್ಞಾಪಕಕ್ಕೆ ಬಂದಂತೆ ಕಾಣಲಿಲ್ಲ.

ಜಾರ್ಕೇ: "ರಾಟೆಗಳ ವಿಷಯವೇ ನನಗೆ ತಿಳಿಯದು. ಯಾರು ಹೇಳಿದರು ನನ್ನನ್ನು ಕೇಳೆಂದು ? ಗಡಿಯಾರಗಳನ್ನು ಬೇಕಾದರೆ ಸರಿ ಮಾಡಿಕೊಡುತ್ತೇನೆ."

ಆರ್ಕ್‌ರೈಟ್: "ಹಾಗೋ ? ಆದರೂ ಅಗೋ! ಅಲ್ಲಿರುವುದಂತೂ ನೂಲಿನ ರಾಟೆಯಂತೆಯೇ ಕಾಣುತ್ತದೆ"—

ಹೀಗೆ ಹೇಳಿ, ಕೂಡಲೇ ಆರ್ಕ್‌ರೈಟ್ ಆ ಗಡಿಯಾರದ ಅಂಗಡಿಯೊಳಕ್ಕೆ ಹೋಗಿ, ಮೂಲೆಯಲ್ಲಿದ್ದ ರಾಟೆಯನ್ನು ನೋಡುತ್ತ ನಿಂತನು. ರಾಟೆಯಲ್ಲಿ ನಾಲ್ಕು ಜೊತೆ ಲಟ್ಟಣಿಗೆಗಳು ಸೇರಿದ್ದುವು. ಅವುಗಳನ್ನು ಒಂದು ಜೊತೆಯ ಹಿಂದೆ ಇನ್ನೊಂದು ಜೊತೆಯಂತೆ ಸಾಲಾಗಿ ಜೋಡಿಸಲಾಗಿದ್ದಿತು. ಅವುಗಳಲ್ಲಿ ಪ್ರತಿಯೊಂದು ಜೊತೆಯೂ ಹಿಂದಿನ ಜೊತೆಗಿಂತ

ಜಾಗ್ರತೆ ತಿರುಗುವುದೆಂಬುದು ಯಂತ್ರಗಳ ವಿಷಯ ತಿಳಿದವರಿಗೆ ಸುಲಭವಾಗಿ ಮನವರಿಕೆಯಾಗುತ್ತಿದ್ದಿತು. ಆರ್ಕ್‌ರೈಟ್ ರಾಟೆಯನ್ನು ನೋಡಿದುದು ಅಂಗಡಿಯುವನಿಗೆ ಸರಿಬೀಳದೆ, ಅವನು ಅಂಗಡಿಯೊಳಗೆ ಶತಪಥ ನಡೆಯುತ್ತಿದ್ದನು.

ಆರ್ಕ್‌ರೈಟ್: "ಅಯ್ಯಾ, ಇಲ್ಲಿ ನೋಡು! ಈ ಯಂತ್ರ ಸರಿಯಾಗಿಲ್ಲ. ಈ ಲಟ್ಟಣಿಗೆಗಳು ಇಷ್ಟೊಂದು ನುಣುಪಾಗಿರಬಾರದು. ಇದನ್ನು ಸರಿಪಡಿಸುವುದು ಹೇಗೆಂದು ನನಗೆ ಗೊತ್ತು"—

"ಆದರೆ................"—

ಅಂಗಡಿಯುವನು ಏನೋ ಹೇಳುತ್ತಿದ್ದವನು, ಆರ್ಕ್‌ರೈಟ್ ಪುನಃ ಮಾತನಾಡಿದುದರಿಂದ ಸುಮ್ಮನಾದನು.

ಆರ್ಕ್‌ರೈಟ್ : "ಇಲ್ಲಿ ನೋಡು ! ಒಳ್ಳೆಯ ಯಂತ್ರ ತಯಾರಿಸಿ ಹಣಗಳಿಸಿ ಸುಖವಾಗಿರಬೇಕೆಂದರೆ, ಈ ಯಂತ್ರದಿಂದ ಪ್ರಯೋಜನವಿಲ್ಲ"–

ತನ್ನ ಮನಸ್ಸಿನಲ್ಲಿದ್ದ ಉದ್ವೇಗವನ್ನು ತೋರಿಸಿಕೊಳ್ಳದೆ ಆರ್ಕ್‌ರೈಟ್ ಶಾಂತನಾಗಿದ್ದನು.

ಜಾರ್ಕೇ; "ಅದು ನನ್ನ ರಾಟೆಯಲ್ಲ..............."

ಆರ್ಕ್‌ರೈಟ್: ನೀನೇನೂ ಚಿಂತಿಸದಿರು; ನಾನು ಹೇಳುವ ಕೆಲಸ ಮಾಡಿಕೊಡು. ಸದ್ಯಕ್ಕೆ ಈ ಸ್ವಲ್ಪ ಹಣವನ್ನು ತೆಗೆದುಕೊ. ನಿನಗೆ ದುಡ್ಡಿಗೆ ತಾಪತ್ರಯವಿಲ್ಲದಂತೆ ವ್ಯವಸ್ಥೆ ಮಾಡೋಣ. ಅಯ್ಯಾ ಜಾನ್ ! ನೀನು ಇನ್ನು ಮುಂದೆ ಶ್ರೀಮಂತನಾಗುತ್ತೀಯೆ. ಅದಿರಲಿ, ಎಲ್ಲಿ ಸ್ವಲ್ಪ ಕಾಗದ 'ಪೆನ್ಸಿಲ್' ಕೊಡು. ಈ ಯಂತ್ರವನ್ನು ಸರಿಪಡಿಸುವುದಕ್ಕೆ ಆಗಬೇಕಾದ ಬದಲಾವಣೆಗಳನ್ನು ಗುರುತು ಹಾಕಿ ಕೊಡುತ್ತೇನೆ."

ದಿನಗಳು ಕಳೆದಂತೆಲ್ಲಾ ಆರ್ಕ್‌ರೈಟ್‌ಗೆ ತನ್ನ ಕ್ಷೌರದ ವೃತ್ತಿಯಲ್ಲಿ ಆಸಕ್ತಿ ಕುಂಠಿತವಾಯಿತು. ಯಾವಾಗಲೂ ಅವನು ಹೊಸ ಬಗೆಯ ರಾಟೆಯನ್ನು ಸೃಷ್ಟಿಸುವುದು ಹೇಗೆಂಬುದನ್ನೇ ಯೋಚಿಸುತ್ತಿರುವನು! ಅವನ ವ್ಯಾಪಾರವು ಬೀಳಾಯಿತು. ಅವನ ಆಳು–ಟಾಮ್–ಬೇರೆಯವರಲ್ಲಿ ಕೆಲಸಕ್ಕೆ ಸೇರಿಕೊಂಡನು. ಆರ್ಕ್‌ರೈಟನ ದುರವಸ್ಥೆಯನ್ನು ನೋಡಿ ಅವನ ಹೆಂಡತಿಗೆ ಬಹು ದುಃಖವಾಯಿತು. ಆರ್ಕ್‌ರೈಟ್ ಮಾತ್ರ ಮನೆಯ ಮಹ

ಡಿಯಮೇಲೆಕುಳಿತುಹಗಲೂ ರಾತ್ರಿಯೂಯೋಚಿಸುತ್ತಿರುವನುನಿಜವಾಗಿಯೂ ಅವನು ತಪಸ್ವಿಯಂತೆ ಏಕಾಗ್ರಚಿತ್ತನಾಗಿ ಕುಳಿತುಬಿಡುವನು. ಮಹಡಿಯನ್ನು ಇಳಿದು ಬರುವುದೇ ಅಪರೂಪವಾಯಿತು. ವಾರಿಂಗ್ಟನ್ನಿಗೆ ಹೋಗಬೇಕಾದಾಗ ಅಥವಾ ಜಾರ್ಕೇನನ್ನು ಮಹಡಿಯ ಮೇಲಕ್ಕೆ ಕರೆದುಕೊಂಡು ಹೋಗಬೇಕಾದಾಗ ಮಾತ್ರ ಕೆಳಗಿಳಿಯುತ್ತಿದ್ದನು.

ತಿಂಗಳುಗಳ ಮೇಲೆ ತಿಂಗಳುಗಳು ಹೀಗೆಯೇ ಕಳೆದವು. ಒಂದು ದಿನ ಸಂಜೆ ಆರ್ಕ್‌ರೈಟ್ ಮಹಡಿಯನ್ನಿಳಿದು ಅಡಿಗೆಕೋಣೆಗೆ ಹೋಗಿ ಹೆಂಡತಿಯೊಡನೆ:—

"ಮೆಗ್! ಒಂದು ಸಂತೋಷದ ವಿಷಯ. ಹೊಸರಾಟೆಯ ಸಂಶೋಧನೆ ಜಯಪ್ರದವಾಗಿದೆ. ಮ ಹ ಡಿ ಗೆ ಬಂದುನೋಡು!"— ಆರ್ಕ್‌ರೈಟ್ ಉತ್ಸಾಹದಿಂದ ಮಾತನಾಡಿ, ಸರಸರನೆ ಮಹಡಿಯ ಮೇಲಕ್ಕೆ ಹತ್ತಿ ಹೋದನು: ಅವನ ಹೆಂಡತಿಗೆ ಕಷ್ಟಗಳನ್ನು ಸಹಿಸಿ ಸಹಿಸಿ, ಬೇಸರವಾಗಿದ್ದ ವಿಷಘಳಿಗೆ ಅದು. ಅವನ ಮಾತು ಆಕೆಗೆ ಸ್ವಲ್ಪವೂ ರುಚಿಸಲಿಲ್ಲ. ಕೋಪದಿಂದ ಅವಳು ಮಹಡಿಯ ಮೇಲಕ್ಕೆ ಹೋದಳು.

ಮಹಡಿಯಲ್ಲಿ ಕೋಣೆಯ ಮಧ್ಯೆ ಹಲಗೆಗಳಿಂದಲೂ, ಹಿತ್ತಾಳೆಯಿಂದಲೂ ತಯಾರಿಸಿದ್ದ ಒಂದು ರಾಟೆಯಿದ್ದಿತು. ಅದನ್ನು ತೋರಿಸಿ ಆರ್ಕ್‌ರೈಟ್, "ನೋಡು! ಸ್ವಲ್ಪವೂ ತಪ್ಪದೆ ತಿರುಗುತ್ತ ದಾರವನ್ನು ಸುತ್ತುತ್ತಿದೆ" ಎಂದನು.

"ಬಹಳ ಚೆನ್ನಾಗಿದೆ! ಅಯ್ಯೋ, ನಿಮ್ಮ ಬುದ್ಧಿಗೆ ಏನೆನ್ನಬೇಕೋ!! ಈ ದರಿದ್ರ ರಾಟೆಗೆ ಇದುವರೆಗೆ ಗಳಿಸಿದ್ದ ಹಣವನ್ನೆಲ್ಲಾ ಸುರಿದದ್ದಾಯಿತು. ನಿಮ್ಮ ಅಂಗಡಿಯ ಕೆಲಸ ನಿಂತು ಯಾವುದೋ ಕಾಲವಾಯಿತು. ನನ್ನಲ್ಲಿದ್ದ ಪುಡಿಕಾಸೂ ಹಾಳಾಯಿತು. ಒಂದುಕಡೆ ಸಾಲದ ಬಾಧೆ; ಜೊತೆಗೆ, ಹೊಟ್ಟೆಗಿಲ್ಲದೆ ಸಾಯಬೇಕು. ಈ ಹುಚ್ಚು ಯಾವ ದೇವರಿಗೆ ಪ್ರೀತಿ?"—

ನಾರಿ ಮುನಿದರೆ ಮಾರಿಯೇ ಸರಿ. ಆಕೆ ಗಟ್ಟಿಯಾದ ಧ್ವನಿಯಲ್ಲಿ ಕೋಪದಿಂದ ಮಾತನಾಡುತ್ತಿದ್ದಳು.

ಆರ್ಕ್‌ರೈಟ್ : "ಸುಮ್ಮನೆ ಯಾಕೆ ಕೂಗುತ್ತಿ ? ಇನ್ನು ನಮಗೆ ಹಣಕ್ಕೆ ಕೊರತೆಯೆ ? ಬೇಕಾದಷ್ಟು ನೂಲನ್ನು ತೆಗೆದು......."



ಆರ್ಕ್‌ರೈಟ್ ಅವಾಕ್ಕಾಗಿ ನಿಂತನು. ಕ್ಷಣಕಾಲ ಅವನು
ಮೂಕ, ದಿಗ್ಭ್ರಾಂತ !

ಮಾತು ಮುಗಿಯುವ ಮೊದಲೇ ಆ ಮತಿಗೆಟ್ಟ ಹೆಂಗಸು: "ಆಹಾ ! ನಿಮ್ಮನ್ನು ಕೈಹಿಡಿದುದಕ್ಕೆ ಹಣ ಬೇರೆ ಕೇಡು!'' ಎಂದವಳೇ ತಡೆಯು ಲಾಗದ ಸಿಟ್ಟಿನ ಭರದಲ್ಲಿ ಕೋಣೆಯಲ್ಲಿದ್ದ ಸುತ್ತಿಗೆಯನ್ನು ತೆಗೆದುಕೊಂಡು ಆ ಹೊಸರಾಟೆಯನ್ನು ಚೂರುಚೂರು ಮಾಡಿಬಿಟ್ಟಳು.

ಆರ್ಕ್‌ರೈಟ್ ಅವಾಕ್ಕಾಗಿ ನಿಂತನು. ಕ್ಷಣಕಾಲ ಅವನು ಮೂಕ, ದಿಗ್ಭ್ರಾಂತ! ಎಷ್ಟಾದರೂ ಅವನೂ ಮನುಷ್ಯಪ್ರಾಣಿಯಲ್ಲವೆ ? ಅವನಿಗೂ ರೋಷ ಬಂದು ಹೆಂಡತಿಯನ್ನು ಗೋಡೆಯ ಕಡೆಗೆ ತಳ್ಳಿದನು.

ಮೆಗ್ ಕಣ್ಣುಗಳಲ್ಲಿ ನೀರು ತುಂಬಿತು. "ನಿಮ್ಮ ಯೋಗ್ಯತೆಗೆ, ವೃಥಾ ತೊಂದರೆ ಕೊಡುತ್ತೀರಾ ? ಇನ್ನು ನಿಮ್ಮ ಪಾಡು ನಿಮಗೆ. ನಾನು ನಮ್ಮ ತಂದೆಯವರ ಮನೆಗೆ ಹೋಗುತ್ತೇನೆ"—

ಮೆಗ್ ಆ ಸ್ಥಳದಿಂದ ಸರಸರನೆ ಹೊರಟುಹೋದಳು.

ಆರ್ಕ್‌ರೈಟನ ಮನಸ್ಸು ಅಲ್ಲೋಲ ಕಲ್ಲೋಲವಾಗಿದ್ದಿತು. ಅವನು ಅಲ್ಲೇ ಇದ್ದ ಕುರ್ಚಿಯ ಮೇಲೆ ಕುಳಿತು,ತಲೆಯ ಮೇಲೆ ಕೈಯಿಟ್ಟುಕೊಂಡು, ಚೂರು ಚೂರಾಗಿ ಬಿದ್ದಿದ್ದ ರಾಟೆಯನ್ನೇ ನೋಡುತ್ತಿದ್ದನು. ಅವನ ಹೆಂಡತಿ ಮೆಗ್ ಹೊರಗಡೆ ಬಾಗಿಲನ್ನು ಧಡಾರನೆ ಮುಚ್ಚಿಕೊಂಡು ಹೋದಾಗಲೇ ಅವನು ಎಚ್ಚತ್ತುದು ಆ ವರೆಗೂ ಕೆಲವು ಕ್ಷಣಗಳ ಕಾಲ ಅವನು ಸ್ಮೃತಿ ತಪ್ಪಿದವನಂತೆ ಇದ್ದನು. ಅವನದು ತುಂಬ ದಯಾರ್ದ್ರ ಮನಸ್ಸು. ಅವನು "ಇರಲಿ, ಅವಳದು ತಾನೇ ಏನು ತಪ್ಪು ? ಒಂದು ಹೊಸ ಸಂಶೋಧನೆ ಯೆಂದರೆ ಎಷ್ಟು ಮಹತ್ವದ ವಿಚಾರವೆಂಬುದು ಈ ಬಡಪಾಯಿ ಹೆಂಗಸಿಗೆ ಹೇಗೆ ತಿಳಿಯಬೇಕು ? ಈ ರಾಟೆಯನ್ನು ಮಾಡುವುದಕ್ಕೇನೋ ಹಲವು ತಿಂಗಳುಗಳೇ ಕಳೆದುಹೋದುವು. ಈಗ ತಾನೇ ಏನು ? ಇನ್ನೊಂದನ್ನು ತಯಾರಿಸಿದರಾಯಿತು. ಹೇಗೂ ಅದನ್ನು ಮಾಡುವುದು ಹೇಗೆಂದು ತಿಳಿದಿದೆ ಯಲ್ಲಾ ? ಇನ್ನು ಭಯವಿಲ್ಲ" ಎಂದು ಸಮಾಧಾನ ತಂದುಕೊಂಡನು.

ಒಂಟಿಯಾಗಿದ್ದ ಆರ್ಕ್‌ರೈಟ್ ಸ್ವಲ್ಪ ದಿನಗಳಾದ ಮೇಲೆ ಬೋಲ್ಟನ್ ಗ್ರಾಮವನ್ನು ಬಿಟ್ಟನು. ಅಂಗಡಿಯನ್ನೂ, ಮನೆಯನ್ನೂ, ಸಾಮಾನು ಗಳನ್ನೂ ಮಾರಿದ ಮೇಲೆಯೇ ಅವನು ಆ ಗ್ರಾಮವನ್ನು ಬಿಟ್ಟು ಹೊರ ಟದ್ದನು. ಮಾರಾಟದಿಂದ ಬಂದಿದ್ದ ಹಣವನ್ನು ತನ್ನ ಜೇಬಿನಲ್ಲಿ ಭದ್ರ

ವಾಗಿಟ್ಟುಕೊಂಡಿದ್ದನು. ಬೋಲ್ಟರ್ ಗ್ರಾಮವನ್ನು ಬಿಟ್ಟು ಹೊರಟು ಆರ್ಕ್‌ರೈಟ್ ವಾರಿಂಗ್ಟನ್ನಿಗೆ ಹೋದನು. ಅಲ್ಲಿ ಜಾರ್ಕೇನನ್ನು ಕಂಡು ಅವನೊಡನೆ 'ಅಥರ್‌ಟನ್' ಎಂಬ ಕಮ್ಮಾರನನ್ನು ನೋಡುವುದಕ್ಕೆ ಹೋದನು. ಆ ಕಮ್ಮಾರನ ಸಹಾಯದಿಂದ ಪುನಃ ಭಾರಿ ರಾಟೆಯೊಂದನ್ನು ತಯಾರಿಸಬೇಕೆಂದು ಅವನು ಯೋಚಿಸುತ್ತಿದ್ದನು. ಕಮ್ಮಾರನೇ ಹಣ ವೆಚ್ಚಮಾಡಿ ರಾಟೆಯನ್ನು ತಯಾರಿಸುವಂತೆ ಅವನನ್ನು ಒಪ್ಪಿಸಬೇಕೆಂದೂ, ರಾಟೆಯಿಂದ ಕೆಲಸ ನಡಿಸಿದಾಗ ಬರುವ ಹಣದಿಂದ ಕಮ್ಮಾರನ ಸಾಲ ತೀರುವಂತೆ ಏರ್ಪಾಟುಮಾಡಿಕೊಳ್ಳಬೇಕೆಂದೂ ಆರ್ಕ್‌ರೈಟ್ ಯೋಚಿಸಿದ್ದನು. ಕಮ್ಮಾರನಲ್ಲಿ, ಈ ಕೆಲಸಕ್ಕೆ ಬೇಕಾದ ಕುಲುಮೆ ಮೊದಲಾದ ಸಮಸ್ತ ಸಾಧನಗಳೂ ಇದ್ದುವು. ಬಹಳ ಮಂದಿ ಕೆಲಸಗಾರರೂ ಇದ್ದರು; ಆದರೆ ಯಾವುದೋ ಕುಗ್ರಾಮದಿಂದ ಬಂದಿದ್ದ ಈ ವಿಚಿತ್ರ ಸ್ವಭಾವದ ಮನುಷ್ಯನ ಮಾತನ್ನು ನಂಬಿಕೊಂಡು ಆ ಹೊಸರಾಟೆಯನ್ನು ಸ್ವಂತ ಹಣದಿಂದ ತಯಾರಿಸುವುದಕ್ಕೆ ಅಥರ್‌ಟನ್ ಒಪ್ಪುವನೆ ? ಸ್ವಲ್ಪಹೊತ್ತು ಯೋಚಿಸಿದ ಮೇಲೆ, ಆರ್ಕ್‌ರೈಟ್ ಅವನನ್ನು ಕೇಳಿ ನೋಡಿಬಿಡುವುದೇ ಸರಿಯೆಂದು ತೀರ್ಮಾನಿಸಿದನು. ಮಾತುಕತೆಯಾಯಿತು. ರಾಟೆಯ ವಿಷಯದಲ್ಲಿ ಅಥರ್‌ಟನ್‌ಗೆ ನಂಬಿಕೆ ಬರಲಿಲ್ಲ. ಯಾವ ಹೊಸ ವಿಷಯವೂ ಹಾಗೆಯೇ. ಸಾಮಾನ್ಯ ಜನರಿಗೆ ಕೂಡಲೆ ಅದರಲ್ಲಿ ನಂಬಿಕೆ ಹುಟ್ಟುವುದಿಲ್ಲ. ಆದರೂ ಆರ್ಕ್‌ರೈಟನ ಆತ್ಮಶ್ರದ್ಧೆಯನ್ನೂ, ಹುರುಪನ್ನೂ ನೋಡಿ ಪ್ರೀತನಾದ ಅಥರ್‌ಟನ್ ಇಬ್ಬರ ಕೆಲಸಗಾರರನ್ನು ಸಹಾಯಕ್ಕೆ ಕೊಟ್ಟನು. ಅವರಿಬ್ಬರೂ ಬಹಳ ನುರಿತ ಕೆಲಸಗಾರರಾಗಿ ಅತ್ಯಂತ ಕಷ್ಟಕರವಾದ ಕೆಲಸಗಳನ್ನು ಮಾಡಿಕೊಡುವುದಕ್ಕೆ ಸಿದ್ಧರಾಗಿದ್ದರು.

ಆರ್ಕ್‌ರೈಟ್, ಜಾರ್ಕೇ ಮತ್ತು ಆ ಇಬ್ಬರು ಕೆಲಸಗಾರರೂ ಸೇರಿ ಬಹಳ ಕಾಲ ದುಡಿದು ಇನ್ನೊಂದು ಹೊಸ ರಾಟೆಯನ್ನು ತಯಾರಿಸಿದರು. ಆ ಕಾಲದಲ್ಲಿ ಆರ್ಕ್‌ರೈಟನಿಗೂ, ಜಾರ್ಕೇಗೂ ಜೀವನಕ್ಕೆ ಬಹಳ ತೊಂದರೆಯಾಯಿತು. ಕಡೆಗೂ ರಾಟೆ ತಯಾರಾದ ಮೇಲೆ ಇನ್ನೊಂದು ಸಮಸ್ಯೆ ಹುಟ್ಟಿತು. ಧನಿಕನಾದ ಮನುಷ್ಯನೊಬ್ಬನನ್ನು ಒಪ್ಪಿಸಿ, ಕಾರ್ಖಾನೆಯನ್ನು ಕಟ್ಟಿಸಿ, ಅದರಲ್ಲಿ ಈ ಹೊಸರಾಟೆಯಿಂದ ಕೆಲಸ ನಡೆಯಿಸಬೇಕಾಗಿದ್ದಿತು.

ಅಂಥ ಧನಿಕನನ್ನು ಹುಡುಕಿ, ಈ ಹೊಸರಾಟೆಯಿಂದ ಅನುಕೂಲವಿದೆ ಯೆಂದು ಅವನಿಗೆ ನಂಬಿಕೆ ಬರುವಂತೆ ಮಾಡಬೇಕಾಗಿದ್ದಿತು.

ತನಗೆ ಬಹಳ ದಿನಗಳಿಂದ ಪರಿಚಯದವನಾಗಿದ್ದ ಸ್ಮಾಲಿ ಎಂಬ ಧನಿಕನೊಡನೆ ಈ ವಿಚಾರವನ್ನೇಕೆ ಪ್ರಸ್ತಾಪಿಸಬಾರದೆಂದು ಆರ್ಕ್‌ರೈಟ್ ಯೋಚಿಸಿದನು. ಸ್ಮಾಲಿಯು 'ಪ್ರೆಸ್ಟನ್' ಎಂಬ ಊರಿನಲ್ಲಿದ್ದನು. ಆದ್ದರಿಂದ ಅವನನ್ನು ನೋಡುವುದಕ್ಕೆಂದು ಆರ್ಕ್‌ರೈಟ್ ಆ ಊರಿಗೆ ಹೋದನು. ಸ್ಮಾಲಿಗೂ ಆರ್ಕ್‌ರೈಟನಿಗೂ ಹೊಸ ರಾಟೆಯ ವಿಷಯದಲ್ಲಿ ಮಾತುಕತೆ ಗಳಾದವು.

ಸ್ಮಾಲಿ: "ಹೊಸರಾಟೆಯ ವಿಚಾರವಲ್ಲವೆ ನೀನು ಹೇಳಿದುದು ?"

ಆರ್ಕ್‌ರೈಟ್: "ಹೌದು, ಅದರಿಂದ ಗಟ್ಟಿಯಾದ ನೂಲಿನ ಎಳೆ ಬರುತ್ತದೆ. ಉಣ್ಣೆಯ ನೂಲಿಗೆ ಬದಲಾಗಿ ಹತ್ತಿಯಿಂದಲೇ ನೂಲನ್ನು ತೆಗೆದು ಉಪಯೋಗಿಸಬಹುದು. ಸಾಧಾರಣ ರಾಟೆಗಳಿಗಿಂತ ಸಾವಿರ ಪಾಲು ಜಾಗ್ರತೆಯಾಗಿ ಈ ರಾಟೆಯಿಂದ ದಾರ ತೆಗೆಯಬಹುದು."

ಸ್ಮಾಲಿ: "ಕಬ್ಬಿಣದ ಗುಂಡುಗಳನ್ನು ಈ ರಾಟೆಯಲ್ಲಿ ಉಪಯೋಗಿಸಿದ್ದೀಯೆ, ಅಲ್ಲವೆ? ಮೂವತ್ತು ವರ್ಷಗಳ ಹಿಂದೆಯೇ ಇಂಥ ರಾಟೆಯನ್ನು ಯಾರೋ ತಯಾರಿಸಿದ್ದರು. ಆದರೆ ಅದರಿಂದ ಏನೂ ಉಪಯೋಗ ವಾಗಲಿಲ್ಲ."

ಆರ್ಕ್‌ರೈಟ್: "ಆಗ ತಯಾರಿಸಿದ್ದ ರಾಟೆಗೂ ಇದಕ್ಕೂ ವ್ಯತ್ಯಾಸ ವಿದೆ. ಆ ರಾಟೆಯಲ್ಲಿದ್ದ ಕಬ್ಬಿಣದ ಗುಂಡುಗಳು ನುಣುಪಾಗಿದ್ದವು. ಅಲ್ಲದೆ ಆ ರಾಟೆಯಲ್ಲಿ ಎರಡೇ ಗುಂಡುಗಳಿದ್ದವು. ನನ್ನ ರಾಟೆಯಲ್ಲಿ ನಾಲ್ಕು ಜೊತೆ ಗುಂಡುಗಳನ್ನು ಜೋಡಿಸಿದ್ದೇನೆ. ಎಲ್ಲದಕ್ಕಿಂತ ಮೇಲುಗಡೆ ಇರುವ ಗುಂಡುಗಳ ಮೇಲೆ ಚರ್ಮವನ್ನು ಸುತ್ತಿದೆ. ಎಲ್ಲದಕ್ಕಿಂತ ಕೆಳಗಿರುವ ಜೊತೆಯ ಗುಂಡುಗಳ ಹೊರಮೈಯಲ್ಲಿ ಸಮವಾದ ಹಳ್ಳತಿಟ್ಟುಗಳನ್ನು ಮಾಡಿದೆ. ಪ್ರತಿಯೊಂದು ಜೊತೆಯೂ ಅದರ ಕೆಳಗಿನ ಜೊತೆಯ ಗುಂಡು ಗಳಿಗಿಂತ ಹೆಚ್ಚು ವೇಗವಾಗಿ ಸುತ್ತುತ್ತದೆ. ಇದರಿಂದ ಹತ್ತಿಯನ್ನು ಎಳೆದಂತೆಯೂ ಆಗುತ್ತದೆ, ಮತ್ತು ಹೊಸೆದಂತೆಯೂ ಆಗುತ್ತದೆ. ಬಂದ ದಾರ ನ್ನು ಯಂತ್ರವು ಕದಿರುಗಳಾಗಿ ಸುತ್ತುತ್ತದೆ."

ಆರ್ಕ್‌ರೈಟನೂ ಸ್ಮಾಲಿಯೂ ರಾತ್ರಿ ಬಹಳ ಹೊತ್ತಿನ ವರೆಗೆ ಚರ್ಚೆ ಮಾಡುತ್ತಿದ್ದರು. ಕಡೆಗೆ ಯಂತ್ರವನ್ನು ನೋಡುವುದಕ್ಕೆ ಸ್ಮಾಲಿ ಒಪ್ಪಿದನು. ರಾಟೆಯನ್ನು ಸ್ಮಾಲಿಯ ಸ್ನೇಹಿತನಾದ ಉಪಾಧ್ಯಾಯನೊಬ್ಬನ ಮನೆಯಲ್ಲಿ ಇಡಿಸಿ, ಅದರ ಕೆಲಸವನ್ನು ನೋಡಬೇಕೆಂದು ತೀರ್ಮಾನವಾಯಿತು. ಮನೆಯ ಸುತ್ತಲೂ ಮರಗಳೂ ಬೇಲಿಯೂ ಇದ್ದುದರಿಂದ, ಯಾರಿಗೂ ಕಾಣದಂತೆ ಅವರು ತಮ್ಮ ಪ್ರಯೋಗವನ್ನು ನಡೆಯಿಸಬಹುದಾಗಿದ್ದಿತು.

ಪ್ರಯೋಗವು ಆ ದಿನ ರಾತ್ರಿ ನಡೆಯಿತೆಂದು ಕಾಣುತ್ತದೆ.

ಮಾರನೆಯ ಬೆಳಗ್ಗೆ ಊರಿನ ಚಮ್ಮಾರನು ಥಾಮಸ್ ಎಂಬಾಕೆಯ 'ಬೂಟ್ಸು'ಗಳನ್ನು ಸರಿಪಡಿಸುತ್ತಾ: "ಅಮ್ಮಾ ! ಆ ಉಪಾಧ್ಯಾಯರ ಮನೆಯಲ್ಲಿ ಏನೇನೋ ಶಬ್ದಗಳಾಗುತ್ತವೆಯಂತೆ, ನಿಜವೆ ?" ಎಂದನು.

ಆಕೆ: "ಹೌದು, ಬೀದಿಯ ಜನಗಳ ಬಾಯಲ್ಲೆಲ್ಲಾ ಅದೇ ಮಾತು. ರಾತ್ರಿಯೆಲ್ಲಾ ಶಬ್ದವಂತೆ. ನಾನೂ ನನ್ನ ತಂಗಿಯೂ ಸಹ ಶಬ್ದವನ್ನು ಕೇಳಿದೆವು. ನಾವೂ ಇದೇ ತಾನೆ ಸ್ಮಾಲಿ ಎಂಬವರಿಗೆ ಈ ವಿಚಾರವನ್ನು ತಿಳಿಸಿ ಬಂದೆವು. ಅವರು ಗೌರವ ಮ್ಯಾಜಿಸ್ಟ್ರೇಟರಾದುದರಿಂದ ವಿಚಾರಣೆ ಮಾಡಬಹುದು. ನನ್ನ ತಂಗಿಯೇನೋ 'ಇದೆಲ್ಲಾ ಕಲಿಯ ಮಹಿಮೆ' ಎನ್ನುತ್ತಾಳೆ; ತೋಟದ ಮಾಲಿಯ ಮಗ ಜಾನ್‌ಹೆನ್ರಿಯು ಆ ಮನೆಯ ಬಾಗಿಲ ಕಂಡಿಯಿಂದ ಒಳಕ್ಕೆ ನೋಡಿದನಂತೆ. ಇಬ್ಬರು ವಿಕಟಾಕಾರದ ಮನುಷ್ಯರು ಏನೇನೋ ಮಾಟಮಂತ್ರ ಮಾಡುತ್ತಿದ್ದುದು ಕಾಣಿಸಿತಂತೆ. ಊರಿನ ಮಾಂಸದ ಅಂಗಡಿಯವನ ಮನೆಯಲ್ಲಿ ಇಳಿದುಕೊಂಡಿರುವ ಇಬ್ಬರೇ ಆ ಮಂತ್ರಗಾರರಿರಬೇಕೆಂದು ಆ ಹುಡುಗ ಹೇಳುತ್ತಾನೆ."

ಚಮ್ಮಾರ: "ಅದಿರಲಿ, ಸ್ಮಾಲಿ ಏನು ಹೇಳಿದರು ?"

ಆಕೆ: "ಅವರು ನಕ್ಕುಬಿಟ್ಟರು. ಪ್ರತಿ ಭಾನುವಾರವೂ ನಾನೂ ನನ್ನ ತಂಗಿಯೂ ಎರಡು ಸಲ 'ಚರ್ಚಿ'ಗೆ ಹೋಗುವುದರಿಂದ ಕಲಿಪುರುಷ ನಮ್ಮ ತಂಟೆಗೆ ಬರುವುದಿಲ್ಲವೆಂದು ಹಾಸ್ಯಮಾಡಿದರು."

ತಾವು ನಡೆಯಿಸುತ್ತಿದ್ದ ಕೆಲಸದ ವಿಚಾರವಾಗಿ ಆ ಊರಿನಲ್ಲಿ ಅಷ್ಟು ಊಹಾಪೋಹಗಳು ಹುಟ್ಟಿದ್ದುದು ಆರ್ಕ್‌ರೈಟ್, ಜಾಕೇ ಇವರಿಬ್ಬರಿಗೂ ಗೊತ್ತಾಗಲೇ ಇಲ್ಲ. ಅವರು ತಮ್ಮ ಕೆಲಸದಲ್ಲಿ ಮಗ್ನರಾಗಿದ್ದರು. ಅವರು

ಹೊಸರಾಟೆಯನ್ನು ಆ ಉಪಾಧ್ಯಾಯರ ಮನೆಯಲ್ಲಿ ಜೋಡಿಸುತ್ತಿದ್ದಾಗ ಒಂದು ದಿನ ಸ್ಮಾರಿ ಕಂಕುಳಲ್ಲಿ ಒಂದು ಗಂಟನ್ನು ಇರುಕಿಕೊಂಡು ಮನೆ ಯೊಳಕ್ಕೆ ಬಂದರು. ಅನಂತರ ಅವರು ಆ ಗಂಟನ್ನು ಅಲ್ಲಿದ್ದ ಒಂದು ಮೇಜಿನ ಮೇಲಿಟ್ಟು: "ಆರ್ಕ್‌ರೈಟ್ ! ನಿನ್ನ ಹೊಸ ಬಟ್ಟೆಗಳನ್ನು ತಂದಿ ದ್ದೇನೆ, ತೆಗೆದುಕೊ" ಎಂದು ಹೇಳಿ ನಕ್ಕರು.

"ಯಾವ ಹೊಸ ಬಟ್ಟೆ ?"

"ಹೊಸ ಉಡುಪನ್ನು ಕೊಡಿಸದಿದ್ದರೆ ಚುನಾವಣೆಯಲ್ಲಿ ನನಗೆ 'ಓಟು' ಕೊಡುವುದಿಲ್ಲವೆಂದು ನೀನು ಹೇಳಿರಲಿಲ್ಲವೆ? ಅದಕ್ಕಾಗಿ ತಂದಿದ್ದೇನೆ, ತೆಗೆದುಕೊ."

"ಚುನಾವಣೆ ಇರಲಿ; ಸದ್ಯಕ್ಕೆ ನಮ್ಮ ಹೊಸ ರಾಟೆಯ ವಿಚಾರದಲ್ಲಿ ಏನು ವ್ಯವಸ್ಥೆ ಮಾಡಿದ್ದೀರಿ ?"

ಅದನ್ನೂ ತೀರ್ಮಾನಿಸಿದ್ದೇನೆ. ನಿನ್ನೆ ರಾತ್ರಿ ರಾಟೆಯಿಂದ ನೂಲು ವುದನ್ನು ನೋಡಿದಾಗಲೇ ಅದು ಸರಿಯಾಗಿದೆಯೆಂದು ನನಗೆ ಭರವಸೆ ಹುಟ್ಟಿದೆ. ಇಗೋ ! ಮಸಿ ಮತ್ತು ಲೇಖನಿ. ಈಗ ಯಂತ್ರದ ಚಿತ್ರವನ್ನು ಬರೆದು, ಅದರ ಮೇಲಿನ ಹಕ್ಕನ್ನು ಪಡೆದುಕೊಳ್ಳುವುದಕ್ಕಾಗಿ ಸರ್ಕಾರಕ್ಕೆ ಅರ್ಜಿಯನ್ನು ಒಪ್ಪಿಸೋಣ. ಹಕ್ಕು ದೊರೆತ ಕೂಡಲೇ ಯಾವುದಾದರೂ ತೀರ್ಮಾನಕ್ಕೆ ಬಂದು ರಾಟೆಯಿಂದ ಕಾರ್ಖಾನೆಯ ಕೆಲಸ ಪ್ರಾರಂಭಿಸಿ ಬಿಡೋಣ."

ಮೂರನೆಯ ವರ್ಷ ಅವರು ಕಾರ್ಖಾನೆಯನ್ನು ಸ್ಥಾಪಿಸಿದರು. ಅಲ್ಲಿದ್ದ ದೊಡ್ಡ ರಾಟೆಗಳ ಚಕ್ರಗಳು ಸುತ್ತುವುದಕ್ಕೆ ಅವರು ಯಂತ್ರಕ್ಕೆ ಕುದುರೆಗಳನ್ನು ಕಟ್ಟಿದ್ದರು. ನೈಲಿಗಟ್ಟಿನ ದಾರವನ್ನು ತೆಗೆದರು. ದಾರವು ಒಂದೇ ಸಮವಾಗಿ, ಗಟ್ಟಿಯಾಗಿದ್ದಿತು. ಆದರೆ ಆ ಹೊಸ ಸಂಶೋಧನೆಯ ವಿಷಯದಲ್ಲಿ ಜನರಿಗೆ ಕೂಡಲೇ ಸಹಾನುಭೂತಿ ಹುಟ್ಟಲಿಲ್ಲ. ಅವರು ತೆಗೆದ ದಾರವನ್ನು ನೇಯ್ಗೆಯವರು ಕೊಂಡುಕೊಳ್ಳದೆ ಮೊಂಡತನ ಮಾಡಿದರು. ಕಾಲುಚೀಲಗಳನ್ನು ತಯಾರಿಸುವವರಿಗೆ ದಾರವನ್ನು ಮಾರಬಹುದೆಂದು ಯೋಚಿಸಿ, ಆರ್ಕ್‌ರೈಟನು 'ನೀಡ್ ಅಂಡ್ ಸ್ಟ್ರಟ್' ಎಂಬ ಕಂಪನಿಯವ ರೊಡನೆ ಪತ್ರವ್ಯವಹಾರ ಬೆಳಸಿದನು, ಅವರು ತಮಗೆ ಎಷ್ಟು ದಾರವನು

ಒದಗಿಸಿದರೆ ಅಷ್ಟನ್ನು ಕೊಂಡುಕೊಳ್ಳುವುದಾಗಿ ಒಪ್ಪಿದರು. ಅಲ್ಲದೆ, ಸ್ವಲ್ಪ ಕಾಲಾನಂತರ ಆರ್ಕ್‌ರೈಟನನ್ನು ತಮ್ಮ ಕಂಪನಿಯ ಪಾಲುದಾರನನ್ನಾಗಿ ಸೇರಿಸಿಕೊಂಡರು.

ದಾರಕ್ಕೆ ಗಿರಾಕಿ ಹೆಚ್ಚಿದ ಮೇಲೆ, ಕುದುರೆಗಳು ಎಳೆಯುವ ಯಂತ್ರದ ವೇಗವು ಸಾಲದೆಂದು ತೋರಿತು. ಚಕ್ರಗಳು ಹೆಚ್ಚು ಜಾಗ್ರತೆ ತಿರುಗಿ, ಬೇಗಬೇಗನೆ ದಾರ ತಯಾರಾಗಬೇಕಾಯಿತು. ಆಗ ಆರ್ಕ್‌ರೈಟನು 'ಡರ್ವೆಂಟ್' ನದಿಯ ಕಣಿವೆಯಲ್ಲಿ ಜಲಶಕ್ತಿಯಿಂದ ಸುತ್ತುವ ಚಕ್ರಕ್ಕೆ ತನ್ನ ರಾಟೆಯನ್ನು ಜೋಡಿಸಿ, ಕೆಲಸವನ್ನು ಮುಂದುವರಿಸಿದನು. ಅಂದಿನಿಂದ ಆರ್ಕ್‌ರೈಟನು ಕಂಡುಹಿಡಿದ ರಾಟೆಗೆ 'ನೀರಿನ ರಾಟೆ' ಎಂಬ ಹೆಸರು ಬಂದಿತು.

ನೀಡ್, ಸ್ಟ್ರಟ್ ಮತ್ತು ಆರ್ಕ್‌ರೈಟ್, ಇವರು ಮೂವರೂ ಇಪ್ಪತ್ತು ವರ್ಷಗಳಿಗಿಂತ ಹೆಚ್ಚು ಕಾಲ ಪಾಲುದಾರರಾಗಿ ಕೆಲಸ ಮಾಡಿದರು. ಪ್ರಾರಂಭದಲ್ಲಿ ಅವರು ಕಾಲುಚೀಲಗಳನ್ನು ಮಾತ್ರ ತಯಾರಿಸುತ್ತಿದ್ದರು. 1774 ರಲ್ಲಿ ಅವರು ಬಟ್ಟೆ ತಯಾರಿಸುವುದನ್ನೂ ಪ್ರಾರಂಭಿಸಿದರು. ಅದಕ್ಕೆ ಹಿಂದೆ, ಇಂಗ್ಲೆಂಡಿನಲ್ಲಿ ಪೂರ್ತಿಯಾಗಿ ಹತ್ತಿಯಿಂದಲೇ ಬಟ್ಟೆ ತಯಾರಾಗಿರಲಿಲ್ಲ. ಹತ್ತಿ ಮತ್ತು ಉಣ್ಣೆ, ಇವೆರಡೂ ಸೇರಿ ಬಟ್ಟೆ ತಯಾರಾಗುತ್ತಿದ್ದಿತು.

ಮಾರನೆಯ ವರ್ಷ ಆರ್ಕ್‌ರೈಟನು ಇನ್ನೂ ಎರಡು ಸಂಶೋಧನೆಗಳನ್ನು ನಡೆಯಿಸಿದನು. ನೂಲು ತೆಗೆಯುವುದಕ್ಕೆ ಬೇಕಾಗುವಂತೆ ಹತ್ತಿಯನ್ನು ದಪ್ಪನಾದ ಬತ್ತಿಗಳನ್ನಾಗಿ ಮಾಡುವ ಏರ್ಪಾಟು ಒಂದು; ಮತ್ತು ಎರಡನೆಯದೆಂದರೆ, ಆ ಹತ್ತಿಯನ್ನು ಉದ್ದವಾದ ಹಗ್ಗಗಳನ್ನಾಗಿ ಮಾರ್ಪಡಿಸುವ ಸಂಶೋಧನೆ. ಇವುಗಳ ಯಂತ್ರಗಳನ್ನೂ ನೂಲಿನ ರಾಟೆಗೇ ಸೇರಿಸಿದನು. ಇದರಿಂದ ಹತ್ತಿಯನ್ನು ಯಂತ್ರದ ಒಂದು ಕೊನೆಯಲ್ಲಿ ಕೊಟ್ಟರೆ ಇನ್ನೊಂದು ಕೊನೆಯಲ್ಲಿ ಸಿದ್ಧವಾದ, ಹಸನಾದ ದಾರವು ಬರುವಂತಾಯಿತು.

ಜಲಶಕ್ತಿಯಿಂದ ತಿರುಗುವ ಇನ್ನೂ ಅನೇಕ ಚಕ್ರಗಳನ್ನೂ ಆರ್ಕ್‌ರೈಟನು ಸ್ಥಾಪಿಸಿದನು. ಆ ಚಕ್ರಗಳಿದ್ದ ಸ್ಥಳಗಳಲ್ಲೆಲ್ಲಾ ನೂಲುವ ರಾಟೆಗಳನ್ನೂ ಇಡಿಸಿದನು. ಜೊತೆಗೆ, ಪಕ್ಕದಲ್ಲಿ ಮಗ್ಗಗಳನ್ನೂ ಜೋಡಿಸಿದನು

ಇದರಿಂದ ಒಂದೇ ಸ್ಥಳದಲ್ಲಿ ಹತ್ತಿಯು ಬಟ್ಟೆಯಾಗಿ ಮಾರ್ಪಡುವುದಕ್ಕೆ ಆಗಬೇಕಾದ ಎಲ್ಲಾ ಅನುಕೂಲಗಳೂ ಇರುವಂತಾಯಿತು. ಆ ಯಂತ್ರ ಗಳಿಂದ ಕೆಲಸವು ಜಾಗ್ರತೆ ನಡೆದುದರಿಂದ ಬಹುಮಂದಿ ಕೆಲಸಗಾರರಿಗೆ ಕೆಲಸವಿಲ್ಲದೆ ಹೋಯಿತು. ಆ ಜನರು ಕೋಪದಿಂದ ಅವನ ಕಾರ್ಖಾನೆ ಯನ್ನು ಸುಟ್ಟರು. ಆದರೆ ಆರ್ಕ್‌ರೈಟ್ ಜಗ್ಗಲಿಲ್ಲ; ನಿಶ್ಚಿತಮನಸ್ಕನಾಗಿ ತನ್ನ ಕೆಲಸವನ್ನು ಮುಂದುವರಿಸಿದನು. ಕೆಲಸಗಾರರಿಗೆ ಪ್ರೋತ್ಸಾಹ ಕೊಟ್ಟು, ಅನುಕೂಲಗಳನ್ನು ಮಾಡಿಕೊಟ್ಟನು. ಇಂಗ್ಲೆಂಡಿನಲ್ಲೆಲ್ಲಾ ಅವನ ಕಾರ್ಖಾನೆಗಳಷ್ಟು ಶುದ್ಧವಾದ, ಸುವ್ಯವಸ್ಥಿತವಾದ ಕಾರ್ಖಾನೆಗಳೇ ಇರಲಿಲ್ಲ.

ಸ್ವಲ್ಪ ಕಾಲಾನಂತರ ಅವನು ಒಂದು ಜಾಹಿರಾತನ್ನು ಪ್ರಕಟಿಸಿ, ತನಗೆ ಗೊತ್ತಾದ ಒಂದು ಮೊಬಲಗನ್ನು ಕೊಟ್ಟರೆ, ತನ್ನ ಹೊಸರಾಟೆಯನ್ನು ಉಪಯೋಗಿಸುವುದಕ್ಕೆ ಕಾರ್ಖಾನೆಗಳವರಿಗೆ ಅವಕಾಶಕೊಡುವುದಾಗಿ ತಿಳಿಸಿದನು. ಕಾರ್ಖಾನೆಗಳ ಮಾಲೀಕರಿಗೆ ಇದರಿಂದ ತೃಪ್ತಿಯುಂಟಾಗಲಿಲ್ಲ. ಅವರು ಅವನ ರಾಟೆಯಲ್ಲೇ ಅಲ್ಪ ಸ್ವಲ್ಪ ಬದಲಾವಣೆ ಮಾಡಿ ಅವು ಹೊಸ ಸಂಶೋಧನೆಗಳೆಂದು ಅವನ ಅನುಮತಿಯಿಲ್ಲದೆಯೇ ಕೆಲಸ ನಡೆಯಿಸುವುದಕ್ಕೆ ಪ್ರಾರಂಭಿಸಿದರು. ಕೆಲವರು ಅವನ ಕೆಲಸಗಾರರಿಗೆ ಲಂಚವನ್ನು ಕೊಟ್ಟು ಅವನ ರಾಟೆಯ ರಚನೆಯಲ್ಲಿನ ಮುಖ್ಯಾಂಶಗಳೇನೆಂದು ತಿಳಿದುಕೊಂಡರು. ಇಷ್ಟು ಹೇಯ ಕೃತ್ಯಗಳನ್ನು ಮಾಡಿದುದೇ ಸಾಲದೆ, ಕೆಲವರಂತೂ ಜಲ ಶಕ್ತಿಯಿಂದ ಸುತ್ತುವ ರಾಟೆಗಳನ್ನೇ ಇಟ್ಟು, ಆ ಸ್ಥಳದ ಸುತ್ತಲೂ ಗೋಡೆ ಯನ್ನೂ, ಬಾಗಲಿಗೆ ಬೀಗವನ್ನೂ ಹಾಕಿ ಒಳಗಡೆ ಕೆಲಸ ನಡೆಯಿಸುತ್ತಿದ್ದರು.

1781ನೆಯ ಇಸವಿಯಲ್ಲಿ ಇಂಗ್ಲೆಂಡಿನ 'ಮ್ಯಾಂಚೆಸ್ಟರ್ ಮರ್ಕ್ಯುರಿ' ಎಂಬ ಪತ್ರಿಕೆಯಲ್ಲಿ ಒಂದು ಜಾಹಿರಾತು ಪ್ರಕಟವಾಗಿದ್ದಿತು. ದೇಶದಲ್ಲಿರುವ ನೂಲುವವರೂ ಮತ್ತು ನೇಯ್ಗೆಯವರೂ ಒಂದು ಮುಖ್ಯ ವಿಚಾರವನ್ನು ಪರಿಶೀಲಿಸುವುದಕ್ಕಾಗಿ, ಒಂದು ಗೊತ್ತಾದ ಕಾಲ ಮತ್ತು ಸ್ಥಳವನ್ನು ಸೂಚಿಸಿ ಅಗ ಅಲ್ಲಿ ಸಭೆ ಸೇರಬೇಕೆಂದು ಅದರಲ್ಲಿ ತಿಳಿಸಿದ್ದಿತು. ಅದರಂದ ಮುಂದೆ ಒಂದು ದಿನ ಮ್ಯಾಂಚೆಸ್ಟರ್ ಪಟ್ಟಣದ ಒಂದು ಉಪಾಹಾರ ಮಂದಿರದಲ್ಲಿ ಬಹು ಮಂದಿ ಸಭೆ ಸೇರಿದ್ದರು.

ಅವರ ಪೈಕಿ ಆರ್ಮ್‌ಸ್ಟ್ರಾಂಗ್ ಎಂಬಾತನು ಬಹಳ ಧನಿಕ ಮತ್ತು ಪ್ರಭಾವಶಾಲಿ. ಆತನು, "ಮಹನೀಯರೆ, ಹತ್ತಿಯ ಕೈಗಾರಿಕೆಯಲ್ಲಿ ಬಹುಕಾಲದಿಂದ ನುರಿತಿರುವ ನಮಗೆಲ್ಲಾ ನಿನ್ನೆ ಮೊನ್ನೆಯಿಂದ ಪ್ರಸಿದ್ಧಿಗೆ ಬಂದಿರುವ ಆರ್ಕ್‌ರೈಟನಿಂದ ಬಹಳ ತೊಂದರೆಯೂ ನಷ್ಟವೂ ಆಗಿದೆ. ಅವನು ಸ್ವಾರ್ಥಿಯಾಗಿ ತನ್ನ ಉಪಯೋಗಕ್ಕೆ ಮಾತ್ರ ಒಂದು ಹೊಸ ರಾಟಿಯನ್ನು ಇಟ್ಟುಕೊಂಡಿದ್ದಾನೆ. ನಮ್ಮೆಲ್ಲರ ಹಿತದೃಷ್ಟಿಯಿಂದಲೂ ಮತ್ತು ಇಂಗ್ಲೆಂಡಿನ ಪುರೋಭಿವೃದ್ಧಿಗಾಗಿಯೂ ಎಲ್ಲರೂ ಅದನ್ನು ಉಪಯೋಗಿಸುವಂತೆ ಆಗಬೇಕು. ಇದಕ್ಕೆ ನೀವೇನು ಹೇಳುತ್ತೀರಿ?" ಎಂದನು.

ಆರ್ಮ್‌ಸ್ಟ್ರಾಂಗ್ ಹೇಳಿದುದು ಎಲ್ಲರಿಗೂ ಬೇಕಾದ ವಿಚಾರವೇ ಆಗಿದ್ದುದರಿಂದ ಪ್ರಾಯಶಃ ಅಲ್ಲಿದ್ದವರೆಲ್ಲಾ ಅದಕ್ಕೆ ಸಮ್ಮತಿಸಿದರು.

ಒಬ್ಬ ಮನುಷ್ಯ ಮಾತ್ರ: "ನೀವು ಹೇಳುವುದೇನೋ ಸರಿ ಆದರೆ, ಆ ಹೊಸ ಯಂತ್ರದ ಮೇಲೆ ಅವನು ಸರ್ಕಾರದಿಂದ ಹಕ್ಕನ್ನು ಪಡೆದಿದ್ದಾನೆ. ಕಾನೂನಿನ ಮೇರೆಗೆ ಅವನ ಪಕ್ಷವೇ ಬಲವಾಗಿದೆ" ಎಂದನು.

ಆರ್ಮ್‌ಸ್ಟ್ರಾಂಗ್ ಹಿಂಜರಿಯದೆ ಹೇಳಿದ: "ಕಬ್ಬಿಣದ ಗುಂಡುಗಳ ಜೋಡಿಸಿರುವ ಹೊಸರಾಟಿಯನ್ನು ಕಂಡುಹಿಡಿದವನು ಆರ್ಕ್‌ರೈಟ್ ಅಲ್ಲವೆಂಬುದನ್ನು ಬಹು ಕಷ್ಟಪಟ್ಟು ರುಜುವಾತು ಮಾಡಿದ್ದೇನೆ."

ಸಭೆಯಲ್ಲಿದ್ದವರೆಲ್ಲಾ ಆಶ್ಚರ್ಯದಿಂದ ತಮ್ಮ ತಮ್ಮಲ್ಲೇ ಪಿಸಪಿಸ ಮಾತನಾಡಿಕೊಳ್ಳುವುದಕ್ಕೆ ಪ್ರಾರಂಭಿಸಿದರು.

ಸದ್ದಡಗಿದ ಮೇಲೆ ಆರ್ಮ್‌ಸ್ಟ್ರಾಂಗ್ ಮಾತನ್ನು ಮುಂದುವರಿಸಿದನು: "ನಾನು ರುಜುವಾತು ಮಾಡಿರುವುದನ್ನು ಸಾಧಿಸುವುದಕ್ಕೆ ಬೇಕಾದ ಸಾಕ್ಷ್ಯವನ್ನು ಹೇಳುವವರೂ ಇಲ್ಲೇ ಇದ್ದಾರೆ." ಹೀಗೆಂದು ಹೇಳಿ ಆರ್ಮ್‌ಸ್ಟ್ರಾಂಗ್ ಬಾಗಲಿನ ಬಳಿ ಇದ್ದವನೊಬ್ಬನಿಗೆ: "ಎಲ್ಲಿ, ಆ ಹೈಸ್ ಮತ್ತು ಕೇ ಎಂಬಿಬ್ಬರೂ ಒಳ" ಎಂದು ಸೂಚಿಸಿದನು.

ಕೇ ಮತ್ತು ಹೈಸ್ ಎಂಬವರಿಬ್ಬರೂ ಅಂಜುತ್ತ ಅಂಜುತ್ತ ಒಳಕ್ಕೆ ಬಂದರು. ಜಾನ್ ಕೇ ಯಾರೆಂದು ಮೊದಲೇ ತಿಳಿಸಿದ್ದೇವೆ.

ಆರ್ಮ್‌ಸ್ಟ್ರಾಂಗನು ಅವನನ್ನು ಕುರಿತು: "ಅಯ್ಯಾ, ಕೇ! ಆರ್ಕ್‌ರೈಟ್ ಎಂಬ ಮನುಷ್ಯ ಯಾರೆಂದು ನಿನಗೆ ತಿಳಿದಿದೆಯೋ?" ಎಂದನು.

ಕೇ: "ತಿಳಿದಿರುವುದು ಮಾತ್ರವೆ? ಅವನ ಅನ್ಯಾಯದಿಂದ ಅಪಾರವಾಗಿ ಕಷ್ಟಪಟ್ಟಿದ್ದೇನೆ. ಅವನು ತೋರಿಸಿದ ಆಸೆಗಳನ್ನೆಲ್ಲಾ ನಂಬಿ, ಅವನಿಗಾಗಿ ಅಸಂಖ್ಯಾತ ಸುಳ್ಳುಗಳನ್ನು ಹೇಳಿದ್ದಾಯಿತು. ದುಡಿದು ದುಡಿದು ಹಣ್ಣಾದ ದ್ದಾಯಿತು. ಕಡೆಗೆ ಅವನು ನನ್ನನ್ನು ಕಳ್ಳನೆಂದು ತಳ್ಳಿಬಿಟ್ಟನು."

ಆರ್ಮ್‌ಸ್ಟ್ರಾಂಗ್:"ಎಲ್ಲಿ, ಈಗ ನಿಮಗೇನು ಗೊತ್ತಿದೆ ಹೇಳಿ, ಹೈಸ್."

ಹೈಸ್: "ಕಬ್ಬಿಣದ ಗುಂಡುಗಳಿರುವ ರಾಟೆಯನ್ನು ಕಂಡುಹಿಡಿದವನು ನಾನೇ; ಜಾನ್‌ಕೇ ನನ್ನ ಬಳಿ ಕೆಲಸಗಾರನಾಗಿದ್ದ. ಇವನಿಗೆ ಲಂಚ ಕೊಟ್ಟು ಆ ಪರಮನೀಚ ಆರ್ಕ್‌ರೈಟನು, ಜಾನ್ ಕೇ ಕೆಲಸ ಮಾಡುತ್ತಿದ್ದ ಸ್ಥಳಕ್ಕೆ ನುಗ್ಗಿ, ಹೊಸರಾಟೆಯನ್ನು ನೋಡಿ, ಅದರ ರಚನೆ ಹೇಗಿದೆಯೆಂಬುದನ್ನು ತಿಳಿದುಕೊಂಡು ಅಂದಿನಿಂದ ತಾನೇ ಕಂಡುಹಿಡಿದುದಾಗಿ ಸಾಧಿಸುತ್ತಿದ್ದಾನೆ.

ಆರ್ಮ್‌ಸ್ಟ್ರಾಂಗ್ ಹೆಚ್ಚು ಪ್ರಶ್ನೆ ಮಾಡಲಿಲ್ಲ. ಸಭೆಯಲ್ಲಿದ್ದವರಲ್ಲಿ ಅನೇಕರು ಅವನ ಬೆಂಬಲಕ್ಕೆ ಬಂದು ಆರ್ಕ್‌ರೈಟನ ಮೇಲೆ ಮೋಸದ ಆಪಾದನೆ ಹೊರಿಸಿ ಮೊಕದ್ದಮೆ ಹೂಡುವುದಕ್ಕೆ ಪ್ರೋತ್ಸಾಹ ಕೊಟ್ಟರು. ಇಂತು ಕೊಟ್ಟ ಸಾಕ್ಷ್ಯದ ಸಹಾಯದಿಂದ ಮೊಕದ್ದಮೆಯಲ್ಲಿ ಆರ್ಕ್‌ರೈಟನನ್ನು ಅನೇಕ ಮಂದಿ ಒಟ್ಟಿಗೆ ವಿರೋಧಿಸಿದರು. ಸಾಕ್ಷ್ಯ ಹೇಳುವುದಕ್ಕೆ ಸೇರಿದ್ದವರೆಲ್ಲ "ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷಿ" ಎಂಬಂಥ ಜನರೇ ಆಗಿದ್ದರು. ಆರ್ಕ್‌ರೈಟನಿಗೆ ವಿರುದ್ಧವಾಗಿ ನ್ಯಾಯಸ್ಥಾನದಲ್ಲಿ ತೀರ್ಮಾನವಾಯಿತು. ಹೊಸರಾಟೆಯ ಮೇಲಿನ ಸಂಪೂರ್ಣ ಸ್ವಾಮ್ಯದ ಹಕ್ಕು ಅವನಿಗೆ ತಪ್ಪಿಹೋಯಿತು. ಹೊಸರಾಟೆಯನ್ನು ಯಾರು ಬೇಕಾದರೂ ಧಾರಾಳವಾಗಿ ಉಪಯೋಗಿಸುವುದಕ್ಕೆ ಮಾರ್ಗವಾಯಿತು.

ತನ್ನ ಹಕ್ಕು ಹೋದುದರಿಂದೇನೂ ಆರ್ಕ್‌ರೈಟನು ಕೆಟ್ಟುಹೋಗಲಿಲ್ಲ. ನ್ಯಾಯಸ್ಥಾನದ ತೀರ್ಪು ಅವನಿಗೆ ವಿರುದ್ಧವಾಯಿತಾದರೂ ಜನತೆಗೇನೋ ಅವನೇ ಹೊಸರಾಟೆಯನ್ನು ಕಂಡುಹಿಡಿದವನೆಂಬುದು ಖಚಿತವಾಗಿದ್ದಿತು. ಮೊಕದ್ದಮೆ ನಡೆದ ಮಾರನೆಯ ವರ್ಷವೇ ಅವನಿಗೆ 'ಸರ್' ಎಂಬುದಾಗಿ ಬಿರುದು ಬಂದಿತು. ಮುಂದಿನ ವರ್ಷ ಅವನು 'ಡರ್ಬಿಷೈರ್' ಪ್ರಾಂತದ

'ಹೈ ಷರೀಫ್' ಎಂಬ ಗೌರವನೀಯ ಪದವಿಗೆ ನೇಮಕವಾದನು. ಮೊದಲಿಗಿಂತ ಹೆಚ್ಚು ರಾಟೆಗಳನ್ನಿಟ್ಟು ಕೆಲಸ ನಡೆಯಿಸಿ ಧನಿಕನಾದನು.

ಕೊನೆಗಾಲಕ್ಕೆ ಅವನು "ವಿಲ್ಲಸ್ಲಿರ್ ಕ್ಯಾಸಲ್" ಎಂಬ ಭವ್ಯಗೃಹ ವನ್ನು ಕಟ್ಟಿಸುವುದಕ್ಕೆ ಪ್ರಾರಂಭಿಸಿದನು. ಆದರೆ, ಅದು ಪೂರ್ತಿಯಾಗುವುದ ರೊಳಗಾಗಿ 1792 ರಲ್ಲಿ ಆರ್ಕ್‌ರೈಟ್ ಮೃತನಾದನು.

ಆರ್ಕ್‌ರೈಟನಿಂದಾದ ಸಾಧನೆಯೇನು? ಅವನ ಜೀವಮಾನಕಾಲದಲ್ಲಿ ಹಬೆಯ ಶಕ್ತಿಯನ್ನು ಯಂತ್ರಗಳಿಗೆ ಉಪಯೋಗಿಸಿಕೊಳ್ಳುವುದು ಕಂಡು ಹಿಡಿಯಲ್ಪಟ್ಟು, ಅವನ ಮರಣ ಹೊಂದುವುದರೊಳಗಾಗಿ ಹಬೆಯ ಶಕ್ತಿ ಯಿಂದ ಹೊಸರಾಟೆಯು ತಿರುಗುವಂತಾಯಿತು. ಬಟ್ಟೆಯ ತಯಾರಿಕೆಯು ಸುಲ ಭವಾಯಿತು. ಒಂದು ಯಂತ್ರದಿಂದ, ಬಹು ಮಂದಿ ಮಾಡುವ ಕೆಲಸವನ್ನು ಸುಲಭವಾಗಿ ನಡೆಯಿಸಬಹುದೆಂದು ತೋರಿಸಿಕೊಟ್ಟವನು ಆರ್ಕ್‌ರೈಟ್. ಅವನ ಕಾಲದಿಂದ ದೊಡ್ಡ ಕಾರ್ಖಾನೆಗಳನ್ನು ಕಟ್ಟಿ ಅನೇಕ ಮಂದಿ ಕೆಲಸ ಗಾರರಿಂದ ಕೆಲಸ ಮಾಡಿಸುವುದು ಅವಶ್ಯಕವಾಯಿತು.

ಹಿಡಿದ ಕೆಲಸವನ್ನು ಹಠದಿಂದ ಸಾಧಿಸುವುದಕ್ಕೂ, ತೊಂದರೆಗಳು ಬಂದಾಗ ಧೈರ್ಯದಿಂದ ಸಹಿಸಿಕೊಂಡು ನಿವಾರಿಸಿಕೊಳ್ಳುವುದಕ್ಕೂ, ಧೈರ್ಯಕ್ಕೂ ಆರ್ಕ್‌ರೈಟನ ಜೀವನವು ಒಳ್ಳೆಯ ನಿದರ್ಶನ. ಐವತ್ತು ವರ್ಷ ವಯಸ್ಸಾದಾಗಲೂ ಅವನು ಪ್ರತಿದಿನವೂ ವ್ಯಾಕರಣವನ್ನು ವ್ಯಾಸಂಗ ಮಾಡಿ, ತನ್ನ ಬರವಣಿಗೆಯನ್ನು ತಿದ್ದಿಕೊಳ್ಳುವುದಕ್ಕೆ ಒಂದು ಘಂಟೆಯ ಕಾಲ ಶ್ರಮಿಸುತ್ತಿದ್ದನು. ಇಂಗ್ಲೆಂಡು ದೇಶವು ಕೈಗಾರಿಕೆಯಲ್ಲಿ ಮುಂದುವರಿಯು ವುದಕ್ಕೆ ಭದ್ರವಾದ ತಳಪಾಯವನ್ನು ಹಾಕಿಕೊಟ್ಟವರಲ್ಲಿ ಆರ್ಕ್‌ರೈಟನು ಮುಖ್ಯನಾದವನು. ಅವನನ್ನು "ಕಾರ್ಖಾನೆಗಳ ಮೂಲಸ್ಥಾಪಕ" ನೆಂದು ಹೇಳಿದರೆ ತಪ್ಪಾಗಲಾರದು.

——

೩

# ರಬ್ಬರಿನಂಥ ಮನಸ್ಸೆ ?

1834 ನೆಯ ಇಸವಿ. ನ್ಯೂಯಾರ್ಕ್ ನಗರದ ರಾಜಬೀದಿಯಲ್ಲಿ ಒಬ್ಬ ಮನುಷ್ಯನು ರಸ್ತೆಯ ಎರಡು ಕಡೆಗಳಲ್ಲಿದ್ದ ಅಂಗಡಿಗಳನ್ನೂ ಸೂಕ್ಷ್ಮ ದೃಷ್ಟಿಯಿಂದ ನೋಡುತ್ತಾ ಹೋಗುತ್ತಿದ್ದನು. ಆತನು ತೆಳುವಾಗಿ, ಸಾಮಾನ್ಯವಾದಷ್ಟು ಎತ್ತರವಾಗಿದ್ದನು. ಬಟ್ಟೆಬರೆಗಳು ಸ್ವಲ್ಪ ಮಲಿನವಾಗಿಯೇ ಇದ್ದುವು. ಅಂಗಡಿಗಳ ಮೇಲಲ್ಲದೆ ಬೇರೆ ಯಾವುದರ ಮೇಲೂ ಆತನಿಗೆ ಗಮನವಿರಲಿಲ್ಲ. ಸ್ವಲ್ಪ ದೂರ ಹೋದ ಮೇಲೆ ಒಂದು ಅಂಗಡಿಯಲ್ಲಿದ್ದ ಯಾವುದೋ ವಸ್ತುವನ್ನೇ ಆತನು ಎವೆಯಿಕ್ಕದೆ ನೋಡುತ್ತ ನಿಂತನು. ಅದಕ್ಕೆ ಅಂಟಿಸಿದ್ದ ಚೀಟಿಯಲ್ಲಿ "ಇಂಡಿಯಾ ರಬ್ಬರಿನ ಈಜುವ ಬೆಂಡು" ಎಂದು ಬರೆದಿದ್ದಿತು. ಗಟ್ಟಿಯಾದ ಬಟ್ಟೆಯ ಮೇಲೆ ರಬ್ಬರನ್ನು ಅಂಟಿಸಿ ಅದನ್ನು ತಯಾರಿಸಿದ್ದರು. ಅದರೊಳಗೆ ಸ್ವಲ್ಪವೂ ನೀರು ಜಿನುಗುವಂತಿರಲಿಲ್ಲ. ಗಾಳಿ ತುಂಬಿ ಉಬ್ಬಿದಾಗ ಅವನ್ನು ಹಿಡಿದುಕೊಂಡು ಭಾರಿ ಮನುಷ್ಯನೂ ಸಹ ನೀರಿನಲ್ಲಿ ತೇಲಬಹುದಾಗಿದ್ದಿತು. ವಸ್ತು ಒಳ್ಳೆಯದೆಂದು ಅವನು ಯೋಚಿಸುತ್ತಿದ್ದಂತೆಯೇ ಚೀಟಿಯಲ್ಲಿ "ಬೆಲೆ: ಒಂದು ಡಾಲರ್ ಐವತ್ತು ಸೆಂಟುಗಳು" ಎಂದು ಬರೆದಿದ್ದುದು ಕಾಣಿಸಿತು. ಆ ಮನುಷ್ಯನು ಒಂದೆರಡು ನಿಮಿಷ ಯೋಚಿಸಿ, ಅಂಗಡಿಯವನಿಗೆ ಅದರ ಬೆಲೆಯನ್ನು ಕೊಟ್ಟು, ಆ ಬೆಂಡನ್ನು ಕಂಕುಳಲ್ಲಿ ಇರುಕಿಕೊಂಡು ಹೊರಟನು. ಆ ದಿನವೆಲ್ಲಾ ಆತನು ನ್ಯೂಯಾರ್ಕಿನಲ್ಲೇ ಇದ್ದು ತನ್ನ ಕೆಲಸಗಳನ್ನು ಮುಗಿಸಿಕೊಂಡು ಮಾರನೆಯ ದಿನ ಊರಿಗೆ ಹಿಂತಿರುಗಿದನು. ಅವನ ಊರು ಇದ್ದುದು ಪೆನ್ಸಿಲ್ವೇನಿಯಾ ಪ್ರಾಂತದಲ್ಲಿ.

ಮನೆಗೆ ಹಿಂತಿರುಗಿ ಸ್ವಲ್ಪ ಹೊತ್ತಾದ ಮೇಲೆ, ಅವನ ಹೆಂಡತಿಯು: "ನಿಮ್ಮ ಕೆಲಸಗಳು ಈ ಸಲವಾದರೂ ಅನುಕೂಲವಾದುವೆ ?" ಎಂದು ಕೇಳಿದಳು.

"ಏನು ಅನುಕೂಲವೋ? ನನ್ನಂಥ ಸಂಶೋಧಕನೊಬ್ಬನು ಇರುವುದೇ ಇನ್ನೂ ಜನರ ಗಮನಕ್ಕೆ ಬಂದಿಲ್ಲ. ಆಗಲಿ, ಎಷ್ಟು ದಿನ ಹೀಗೆಯೇ ಇರುತ್ತೋ ನೋಡೋಣ."

"ಜನರಿಗೆ ಬೇಕಾದ ಹಲವು ಹೊಸ ವಸ್ತುಗಳನ್ನು ಕಷ್ಟಪಟ್ಟು ಕಂಡುಹಿಡಿದಿದ್ದೀರಲ್ಲಾ ? ಆದರೂ ಜನ ಏಕೆ ಇಷ್ಟು ಉದಾಸೀನ ರಾಗಿದ್ದಾರೆ ?"

"ಕಂಡು ಹಿಡಿದಿರುವುದೇನೋ ಸರಿ. ಹೊಸ ಬಗೆಯ ಗುಂಡಿಗಳು, ಚಮಚಗಳು, ಹುಲ್ಲು ತುಂಬುವುದಕ್ಕೆ ಬೇಕಾದ ಹುಲ್ಲುಕವೆಗಳು—ಇಂಥ ವನ್ನೆಲ್ಲಾ ಕಂಡುಹಿಡಿದಿದ್ದೇನೆ. ಆದರೇನಂತೆ ? ಜನಕ್ಕೆ ಅದೊಂದೂ ಬೇಡ. ಹೊಸ ಗುಂಡಿಯಿಲ್ಲದಿದ್ದರೆ ಹಳೆಯ ಗುಂಡಿಯೇ ಆದೀತು. ಹೊಸ ಚಮಚವೇ ಬೇಕೆಂಬ ನಿರ್ಬಂಧವೇನು ? ಹುಲ್ಲು ತುಂಬುವುದಕ್ಕೆ ಕವೆ ಹೊಸದಾದರೇನು, ಹಳೆಯದಾದರೇನು ?''

"ಆದರೂ, ನೀವು ಕಂಡುಹಿಡಿದಿರುವುದನ್ನು ಬೇರೆಯವರು ತಯಾರಿಸು ವಂತೆಯೇ ಇಲ್ಲವಲ್ಲಾ ? ಅವುಗಳ ಮೇಲಿರುವ ಪೂರ್ಣ ಹಕ್ಕಿನಿಂದ ಹಣ ಬರುತ್ತಿಲ್ಲವೆ ?''

"ಹಣ ಬರುತ್ತಿದೆ. ನಿಜ. ಆದರೆ ಪ್ರತಿ ಸಲ ಹಕ್ಕು ದೊರೆಯುವು ದಕ್ಕೂ ಬಹಳ ಹಣ ಸಾಲಮಾಡಿ ಸುರಿದಿರುತ್ತೇನೆ. ಬಂದ ಹಣವೆಲ್ಲಾ ಸಾಲ ತೀರುವುದಕ್ಕೇ ಹೋಗುತ್ತದೆ. ಅದೂ ಸಾಲದೆ, ಕೆಲವು ಬಾರಿ ಸೆರೆಮನೆಗೂ ಹೋಗಲಿಲ್ಲವೆ ?''

"ಇರಲಿ ಬಿಡಿ. ಇಂಥ ಕಷ್ಟಗಳನ್ನು ಕೊಟ್ಟು ದೇವರೇ ಪರೀಕ್ಷಿಸು ತ್ತಾನಂತೆ.''

ಗಂಡ ಹೆಂಡಿರು ಹೀಗೆ ಮಾತಾಡಿಕೊಳ್ಳುತ್ತಿದ್ದಾಗ ಅವರ ಒಂಬತ್ತು ವರ್ಷದ ಮಗಳು ಬಂದು : "ಅಪ್ಪಾ, ಅದೇನೋ ಹೊಸ ಸಾಮಾನು ತಂದಿ ದ್ದೀರಲ್ಲಾ, ಏನದು ಹೇಳುವುದಿಲ್ಲವೆ ?" ಎಂದಳು.

ಚಾರ್ಲ್ಸ್ ಗುಡ್‌ಇಯರ್ ಎಂಬ ಆ ಸಂಶೋಧಕನು : "ಅದು ಈಜುವ ಬೆಂಡು. ಅವರೊಳಗೆ ಗಾಳಿ ತುಂಬಿ, ಈಜುವಾಗ ಉಪಯೋಗಿಸ

ಬಹುದು" ಎಂದನು. ಹೀಗೆ ಹೇಳುತ್ತಾ ಗುಡ್‌ಇಯರ್ ತನ್ನ ಬಾಯಿಂದ ಅದರೊಳಕ್ಕೆ ಗಾಳಿ ಊದಿದನು.

ಹುಡುಗಿಯು : ''ಅಬ್ಬ ! ಎಷ್ಟು ಕೆಟ್ಟವಾಸನೆಯ ಸಾಮಾನು ! ಇದನ್ನು ಯಾವುದರಿಂದ ತಯಾರಿಸಿದ್ದಾರೋ ?'' ಎಂದಳು.

''ಇದನ್ನು ರಬ್ಬರಿನಿಂದ ತಯಾರಿಸಿದೆ'' ಎಂದ ಗುಡ್‌ಇಯರ್.

ಅವನ ಹೆಂಡತಿಯು: ''ಇದನ್ನೇಕೆ ಕೊಂಡುಕೊಂಡಿರಿ ?'' ಎಂದು ಕೇಳಿದಳು.

''ಒಂದು ರೀತಿ ನೋಡಿದರೆ, ಇದನ್ನು ಕೊಂಡುಕೊಂಡದ್ದೂ ದಡ್ಡ ತನವೇ. ಇದ್ದ ಪುಡಿಕಾಸನ್ನು ಇದಕ್ಕೆ ಕೊಟ್ಟು ಈಗ ಕೈಯಲ್ಲಿ ಕುರುಡು ಕಾಸೂ ಇಲ್ಲವಾಗಿದೆ. ಆದರೂ ರಬ್ಬರಿನ ವಿಚಾರದಲ್ಲಿ ನನಗೆ ಯಾವಾಗಲೂ ಸ್ವಲ್ಪ ಕುತೂಹಲವೇ. ರಬ್ಬರಿನಿಂದ ಅನೇಕ ಸಾಮಾನುಗಳನ್ನು ತಯಾರಿಸ ಬಹುದು"—ಎನ್ನುತ್ತಾ ಗುಡ್‌ಇಯರ್ ಆ ಬೆಂಡಿನ ಮೇಲೆ ಕೈಯಾಡಿ ಸುತ್ತ, ಏನೋ ಯೋಚನೆಮಾಡುತ್ತ ನಿಂತನು.

ಕೆಲವು ನಿಮಿಷಗಳಾದ ಮೇಲೆ ಗುಡ್‌ಇಯರ್ ಕತ್ತೆತ್ತಿ ಗಡಿಯಾರ ವನ್ನು ನೋಡಿ, "ಓ! ಆಗಲೇ ಎಂಟು ಗಂಟೆ. ಮಗು, ಎಲ್ಲೆ! ಪ್ರಾರ್ಥನೆ ಓದುವುದಕ್ಕೆ ಬೈಬಲ್ ತೆಗೆದುಕೊಡು," ಎಂದನು.

ಪ್ರಾರ್ಥನೆಯಾದ ಮೇಲೆ ಗುಡ್‌ಇಯರ್ ವಿಶ್ರಾಂತಿಗೆ ಹೋದನು. ಆದರೂ ಬಹು ಹೊತ್ತು ರಬ್ಬರಿನ ವಿಚಾರವೇ ಆ ಸಂಶೋಧಕನ ಮನಸ್ಸಿನಲ್ಲಿ ಮಿಡಿಯುತ್ತಿದ್ದಿತು.

ಒಂದು ವಾರ ಕಳೆದ ಮೇಲೆ ಗುಡ್‌ಇಯರ್ ಪುನಃ ನ್ಯೂಯಾರ್ಕಿಗೆ ಹೋದನು. ಅಲ್ಲಿ ತಾನು ಈಜುವ ಬೆಂಡನ್ನು ಕೊಂಡುಕೊಂಡಿದ್ದ ಅಂಗಡಿಗೆ ಹೋಗಿ, ಮ್ಯಾನೇಜರನ್ನು ಕಂಡು: "ಸ್ವಾಮಿ, ನೀವು ಕೊಟ್ಟಂಥ ಈಜುವ ಬೆಂಡನ್ನು ಇನ್ನೂ ಚೆನ್ನಾಗಿರುವಂತೆ ತಯಾರಿಸುವುದನ್ನು ಕಂಡುಹಿಡಿದಿ ದ್ದೇನೆ. ಒಳ್ಳೆಯ ಬೆಲೆ ಕೊಟ್ಟರೆ ಈ ಸಂಶೋಧನೆಯ ಮೇಲೆ ಪೂರ್ತಿ ಹಕ್ಕನ್ನು ನಿಮಗೇ ಮಾರಿಬಿಡುತ್ತೇನೆ" ಎಂದು ತಿಳಿಸಿದನು.

"ನೀವೇನೋ ಮಾರಿಬಿಡುತ್ತೀರಿ. ಆದರೆ ನಾವು ಕೊಂಡುಕೊಂಡು ಬಿಡಬೇಕಲ್ಲ ? ಈ ಹಾಳು ರಬ್ಬರು ಸಾಮಾನುಗಳಿಗೆ ಹಣ ಸುರಿದು, ಇದು

ವರೆಗೆ ಆಗಿರುವ ನಷ್ಟವೇ ಸಾಕು. ಇನ್ನು ಮೇಲೆ ರಬ್ಬರು ಸಾಮಾನುಗಳ ವಿಚಾರವೇ ಬೇಡ," ಎಂದು ನಿರಾಶಾದಾಯಕವಾಗಿ ಅಂಗಡಿಯವನು ಹೇಳಿದನು.

ಗುಡ್‌ಇಯರನ ಮುಖ ಕಳೆಗೆಟ್ಟಿತು. ಅದನ್ನು ನೋಡಿ ಆ ವ್ಯಾಪಾರಿಗೂ ಸಹ ಸ್ವಲ್ಪ ವಿಷಾದವಾಯಿತು. ಆದರೆ, ಎಷ್ಟಾದರೂ ವ್ಯಾಪಾರಿಯಲ್ಲವೆ ? ಅವನಂತೂ ಸಹಾಯಮಾಡುವ ಸ್ಥಿತಿಯಲ್ಲಿರಲಿಲ್ಲ. ಗುಡ್‌ಇಯರನಿಗೆ ಸಮಾಧಾನ ಹೇಳುತ್ತ ಆತನು: "ನೋಡಿ, ರಬ್ಬರಿನ ವಿಚಾರದಲ್ಲಿ ನನಗೆ ಬೇಸರವಾಗುವುದಕ್ಕೆ ಕಾರಣವಿಷ್ಟೆ: ರಬ್ಬರು ಸಾಮಾನುಗಳನ್ನು ಕೊಂಡುಕೊಳ್ಳುವ ಜನರಲ್ಲಿ ಮುಕ್ಕಾಲುಪಾಲು ಮಂದಿ ಆ ಸಾಮಾನುಗಳು ಚೆನ್ನಾಗಿಲ್ಲವೆಂದು ವಾಪಸು ಕೊಡುತ್ತಾರೆ. ಇವುಗಳನ್ನು ಮಾರುವುದರಿಂದ ವೃಥಾ ತೊಂದರೆ. ಬೇಸಗೆಯಲ್ಲಿ ರಬ್ಬರು ಅಂಟಾಗಿ ಬಿಡುತ್ತದೆ. ಆಗ ಅದರ ವಾಸನೆ ಸಹಿಸಲಸಾಧ್ಯ. ಚಳಿಗಾಲದಲ್ಲಿ ಅದು ಒರಟಾಗಿ ಮುರಿದುಹೋಗುವಂತೆ ಆಗುತ್ತದೆ. ಒಂದು ವೇಳೆ ರಬ್ಬರು ಬೇಸಗೆಯಲ್ಲಿ ಕರಗದಂತೆಯೂ ಚಳಿಗಾಲದಲ್ಲಿ ಮೃದುವಾಗಿರುವಂತೆಯೂ ತಯಾರಿಸುವುದನ್ನು ಕಂಡುಹಿಡಿದರೆ, ಆ ಸಂಶೋಧನೆ ನಿಜವಾಗಿಯೂ ಬಹಳ ಲಾಭಕರ. ಈಜುವ ಬೆಂಡಿನ ಬಾಯಿಯ ರಚನೆಯನ್ನು ಬದಲಾಯಿಸಿದ್ದೀರಿ. ಇದೇನೂ ಅಷ್ಟು ದೊಡ್ಡ ಸಂಶೋಧನೆಯಲ್ಲ. ನನಗೆ ತೋರಿದ್ದನ್ನು ಹೇಳಿದ್ದೇನೆ, ಕೋಪಿಸಬಾರದು. ನನ್ನಿಂದ ಸಹಾಯವಾಗುವುದಾಗಿದ್ದರೆ ಮಾಡುತ್ತಿದ್ದೆ" ಎಂದನು.

"ರಬ್ಬರಿನಿಂದ ಮುಂದೆ ಬಹಳ ಉಪಯೋಗವಿದೆ, ಅಲ್ಲವೆ ?"

"ನಾನು ಹೇಳುವಂತೆ ರಬ್ಬರನ್ನು ತಯಾರಿಸುವುದನ್ನು ಕಂಡುಹಿಡಿಯುವವನು ಶ್ರೀಮಂತನಾಗುವನು."

ಗುಡ್‌ಇಯರ್ ಅಂಗಡಿಯನ್ನು ಬಿಟ್ಟು ಹಿಂತಿರುಗಿದಾಗ ದಾರಿಯಲ್ಲಿ ಒಂದು ವಿಷಯವನ್ನು ನಿರ್ಧರಿಸಿದನು. ರಬ್ಬರು ಎಲ್ಲರಿಗೂ ಉಪಯುಕ್ತವಾದ ವಸ್ತುವಾಗುವಂತೆ ಮಾಡುವುದಕ್ಕೆ ತನ್ನ ಜೀವಮಾನವನ್ನೆಲ್ಲಾ ಮೀಸಲಾಗಿಡಬೇಕೆಂಬುದೇ ಆ ನಿರ್ಧಾರ. ಈಜುವ ಬೆಂಡನ್ನು ತಯಾರಿಸುವುದಕ್ಕೆ ಮಾತ್ರವೇ ಅಲ್ಲದೆ, ಶಿಬಿರಗಳನ್ನು ಕಟ್ಟುವುದಕ್ಕೆ ಬೇಕಾದ ಬಟ್ಟೆ,

ದೋಣಿಗಳು, ಪಾದರಕ್ಷೆಗಳು, ಮೊದಲಾದ ಅನೇಕ ವಸ್ತುಗಳ ತಯಾರಿಕೆಯಲ್ಲಿ ರಬ್ಬರು ಉಪಯೋಗವಾಗುವುದೆಂದು ಅವನಿಗೆ ತೋರಿತು. ಆ ರೀತಿ ಉಪಯೋಗವಾಗುವಂತೆ ಅದನ್ನು ಮಾರ್ಪಡಿಸಿದಾಗಲೇ ತನಗೆ ಕೀರ್ತಿಯೂ, ಮಾನವಕೋಟಿಗೆ ಪ್ರಯೋಜನವೂ ಆಗುವುದು ಖಚಿತವೆಂದು ಕಂಡಿತು. ದೇವರೇ ತನ್ನನ್ನು ಆ ಕೆಲಸಕ್ಕೆ ನಿಯೋಜಿಸಿದ್ದಾನೆಂದು ಆತನು ಭಾವಿಸಿದನು.

ಆಗ್ಗೆ ನೂರಾರು ವರ್ಷಗಳಿಂದಲೂ ರಬ್ಬರು ಎಲ್ಲರಿಗೂ ತಿಳಿದ ವಸ್ತುವೇ ಆಗಿದ್ದಿತು. ಅಮೇರಿಕಾ ಖಂಡದ ನಿವಾಸಿಗಳು ರಬ್ಬರು ಚೆಂಡಿನಿಂದ ಆಟವಾಡುತ್ತಿದ್ದುದನ್ನು ಕೊಲಂಬಸನು ಕಂಡಿದ್ದನು. ಹದಿನೆಂಟನೆಯ ಶತಮಾನದ ವೇಳೆಗೆ ಸೀಸದಕಡ್ಡಿಯಿಂದ ಬರೆದುದನ್ನು ರಬ್ಬರಿನಿಂದ ಅಳಿಸಬಹುದೆಂಬುದು ತಿಳಿದುಬಂದಿತು. ಆಗಲೇ ಆ ಪದಾರ್ಥಕ್ಕೆ 'ರಬ್ಬರ್' ಎಂಬ ಹೆಸರು ಬಂದುದು. ಮೊದಲು "ವೆಸ್ಟ್ ಇಂಡೀಸ್" ದ್ವೀಪ ಸಮುದಾಯದಲ್ಲಿ ಆ ವಸ್ತು ದೊರೆತುದರಿಂದ ಅದಕ್ಕೆ 'ಇಂಡಿಯಾ ರಬ್ಬರ್' ಎಂಬ ಹೆಸರಾಯಿತು.

ಹತ್ತೊಂಭತ್ತನೆಯ ಶತಮಾನದ ಪ್ರಾರಂಭದಲ್ಲಿ ಅಮೇರಿಕದಲ್ಲಿ ರಬ್ಬರಿನಿಂದ ಪಾದರಕ್ಷೆಗಳನ್ನು ತಯಾರಿಸುವುದೂ ಮತ್ತು ಮಾರಾಟ ಮಾಡುವುದೂ ಪ್ರಾರಂಭವಾಯಿತು. ರಬ್ಬರು ಸೆಕೆಗೆ ಕರಗುತ್ತಿದ್ದುದರಿಂದ ಪಾದರಕ್ಷೆಗಳ ಆಕಾರವು ಕೆಡದೇ ಇರುವುದಕ್ಕಾಗಿ ಅಂಗಡಿಗಳಲ್ಲಿ ಪಾದರಕ್ಷೆಗಳೊಳಗೆ ಹುಲ್ಲನ್ನು ತುಂಬಿಟ್ಟಿರುತ್ತಿದ್ದರು. ಕೊಂಡು ಕೊಳ್ಳುವವರಿಗೆ ಪಾದರಕ್ಷೆಗಳನ್ನು ಕೊಡುವಾಗ ಆ ಹುಲ್ಲನ್ನು ತೆಗೆದುಹಾಕಿಬಿಡುತ್ತಿದ್ದರು. ಒಂದೊಂದು ಸಲ ಹುಲ್ಲನ್ನು ಎಳೆದಾಗ ಹುಲ್ಲಿನ ಜೊತೆಗೆ ಚೇಳು, ಹುಳುಹುಪ್ಪಟೆಗಳು ಈಚೆಗೆ ಬರುತ್ತಿದ್ದುವು. ಆಗ ಪಾದರಕ್ಷೆಗಳನ್ನು ಕೊಂಡುಕೊಳ್ಳಲು ಬಂದ ಸ್ಥಿತ್ತಿನ ನಾರೀಮಣಿಯರು ಗಾಬರಿಯಿಂದ ಚೀರುತ್ತಿದ್ದರು! ಪಾದರಕ್ಷೆಗಳು ಕೊಂಡುಕೊಳ್ಳುವವರ ಕಾಲಿನ ಅಳತೆಗೆ ಸರಿಯಾಗಿಲ್ಲದಿದ್ದಾಗ, ಬೆಂಕಿಯ ಮುಂದೆ ಪಾದರಕ್ಷೆಗಳನ್ನು ಹಿಡಿದು, ಕರಗಿಸಿ, ಸರಿಯಾದ ಅಳತೆಯ ಮರದ ಕಾಲುಗಳನ್ನು ಅವುಗಳೊಳಗೆ ಇಟ್ಟು ಸರಿಪಡಿಸುತ್ತಿದ್ದರು. ಇಂಥ ಪಾದರಕ್ಷೆಗಳಿಗೆ ಅಂಗಡಿಯವರು ನಾನಾ ಬಗೆಯ

ಬಣ್ಣಗಳನ್ನು ಹಚ್ಚಿ ಮಾರುತ್ತಿದ್ದರು. ಸ್ವಲ್ಪ ಕಾಲಾನಂತರ ಎಡ್ವಿನ್ ಮಾರ್ಕಸ್ ಚಫಿ ಎಂಬಾತನು ರಬ್ಬರನ್ನು ಕರ್ಪೂರತೈಲದಲ್ಲಿ ಕರಗಿಸಿ,ಬಟ್ಟೆಯ ಮೇಲೋ, ಚರ್ಮದ ಮೇಲೋ ಲೇಪಿಸಿ,ಅನೇಕ ವಸ್ತುಗಳನ್ನು ತಯಾರಿಸುವುದನ್ನು ಕಂಡುಹಿಡಿದನು. ಆದರೆ ಆ ವಸ್ತುಗಳಲ್ಲಿ ನೀರಿಳಿಯದೆ ಇದ್ದರೂ, ಅವು ಬೇಸಗೆಯಲ್ಲಿ ಸ್ವಲ್ಪ ಕರಗಿ ದುರ್ಗಂಧಯುಕ್ತವಾಗಿಯೂ,ಚಳಿಗಾಲದಲ್ಲಿ ಒರಟಾಗಿ ಬಿರುಕುಬಿಟ್ಟುಕೊಳ್ಳುತ್ತಲೂ ಇದ್ದುವು !

ಹೀಗೆ ರಬ್ಬರು ಬೇಸಗೆಯಲ್ಲಿ ಕರಗದೆಯೂ, ಚಳಿಗಾಲದಲ್ಲಿ ಒರಟಾಗದೆಯೂ ಇರುವಂತೆ ಅದನ್ನು ಹಸನುಮಾಡಬೇಕೆಂದು, ಹಿಂದೆಯೇ ತಿಳಿಸಿದಂತೆ, 1834 ರಲ್ಲಿ ಚಾರ್ಲ್ಸ್ ಗುಡ್‌ಇಯರ್ ತೀರ್ಮಾನಿಸಿದನು. ಹೀಗೆ ತೀರ್ಮಾನಿಸುವುದಕ್ಕೆ ಹಿಂದೆಯೇ ಆ ಸಂಶೋಧಕನು ಬೇರೆ ಸಂಶೋಧನೆಗಳಿಗಾಗಿ ಬಹಳ ಹಣ ವ್ಯಯ ಮಾಡಿ,ಕೆಲವು ಬಾರಿ ಕಾರಾಗೃಹವನ್ನೂ ಕಂಡಿದ್ದನು. ಹೊಸ ಸಂಶೋಧನೆಗಳಿಗಾಗಿ ಹಿಂದೆ ಆಸ್ತಿಯನ್ನು ಕಳೆದುಕೊಂಡಿದ್ದುದೂ ಉಂಟು. ಆದರೆ ಗುಡ್‌ಇಯರನ ಮನೋನಿಶ್ಚಯವು ಪ್ರಬಲವಾದುದು. ರಬ್ಬರಿನ ವಿಷಯದಲ್ಲಿ ಸಂಶೋಧನೆ ನಡೆಯಿಸಬೇಕೆಂದು ತೀರ್ಮಾನಿಸಿದ ಮೇಲೆ,ತನ್ನ ಮನೆಯವರನ್ನೆಲ್ಲಾ ಒಂದು ಹಳ್ಳಿಗೆ ಕಳುಹಿಸಿ, ತಾನು ಮಾತ್ರ ಸಂಶೋಧನೆಯ ಕೆಲಸಕ್ಕಾಗಿ ನ್ಯೂಯಾರ್ಕಿಗೆ ಹೋದನು. ಅಲ್ಲಿ ಮೊದಲು ಮೊದಲು ತನ್ನ ಒಳ್ಳೆಯ ಮಾತು, ನಡವಳಿಕೆಗಳಿಂದ ಕೆಲವರು ರಸಾಯನಿಕ ಶಾಸ್ತ್ರಜ್ಞರ ಸ್ನೇಹವನ್ನು ಸಂಪಾದಿಸಿ, ಸಂಶೋಧನೆಯ ಕೆಲಸದಲ್ಲಿ ತನಗೆ ಸಹಾಯಕರಾಗುವಂತೆ ಅವರನ್ನು ಒಪ್ಪಿಸಿದನು. ಮೊಟ್ಟಮೊದಲು ರಬ್ಬರಿನ ತಯಾರಿಕೆಯಲ್ಲಿ ಸುಣ್ಣವನ್ನು ಬೆರೆಸಿ ತಯಾರಿಕೆಯನ್ನು ಉತ್ತಮಪಡಿಸಿದನು. ಆ ಸಂಶೋಧನೆಗಾಗಿ 'ಮೆಕ್ಯಾನಿಸ್ಟ್ ಸೊಸೈಟಿ' ಎಂಬ ಸಂಘದವರು ಗುಡ್‌ಇಯರನಿಗೆ ಬೆಳ್ಳಿಯ ಪದಕವನ್ನು ಬಹುಮಾನವಾಗಿ ಕೊಟ್ಟರು. ಆದರೆ, ಸುಣ್ಣವನ್ನು ಸೇರಿಸಿ ತಯಾರಿಸಿದ ರಬ್ಬರೂ ಬೇಸಗೆಯಲ್ಲಿ ಕರಗುವುದಕ್ಕೆ ಪ್ರಾರಂಭವಾಯಿತು. ಬೇರೆ ಸಂಶೋಧನೆಗಳನ್ನು ಮಾಡಬೇಕಾದುದು ಅನಿವಾರ್ಯವಾಯಿತು. 'ನೈಟ್ರಿಕ್ ಆ್ಯಸಿಡ್' ದ್ರಾವಕವನ್ನು ಸೇರಿಸಿ ತಯಾರಿಸಿದ ರಬ್ಬರು ಇನ್ನೂ ಸ್ವಲ್ಪ ಚೆನ್ನಾಗಿದ್ದಿತು. ಆದರೆ ಸಂಪೂರ್ಣ ತೃಪ್ತಿಕರವಾಗಿರಲಿಲ್ಲ. ಸಾಲ

ದುದಕ್ಕೆ ಅದೇ ಸಮಯಕ್ಕೆ ದೇಶದಾದ್ಯಂತವೂ ವ್ಯಾಪಾರವು ಬೀಳಾದುದರಿಂದ ಅವನ ರಬ್ಬರಿಗೂ ವ್ಯಾಪಾರ ಕಡಮೆ ಬಿದ್ದಿತು. ಅಷ್ಟೇ ಅಲ್ಲದೆ ಸರ್ಕಾರಕ್ಕೆ ಗುಡ್‌ಇಯರ್ ಒದಗಿಸುವುದಾಗಿ ಒಪ್ಪಿ ತಯಾರಿಸಿದ್ದ 150 ರಬ್ಬರು ಚೀಲಗಳು ಮೊತ್ತಗಾಗಿ ದುರ್ವಾಸನೆ ಹೊಂದಿದುವು.

ರಬ್ಬರು ಹೀಗೆ ಹತೋಟಿಗೆ ಸಿಗದೆ ಅದರತೃಪ್ತಿಕರವಾದ ತಯಾರಿಕೆಯ ವಿಧಾನವು ಇನ್ನೂ ಪ್ರಕೃತಿಯೊಳಗಿನ ರಹಸ್ಯವಾಗಿಯೇ ಉಳಿದಿದ್ದಿತು. ಆದರೆ ಗುಡ್‌ಇಯರನ ಮನಸ್ಸು ರಬ್ಬರಿನಂಥ ಮನಸ್ಸಾಗಿರಲಿಲ್ಲ. ರಬ್ಬರಿನ ತಯಾರಿಕೆಯನ್ನು ಉತ್ತಮಪಡಿಸುವುದಕ್ಕೆ ಹೊರಟಿದ್ದ ಆ ಸಂಶೋಧಕನ ಮನಸ್ಸು ಉಕ್ಕಿನದಾಗಿದ್ದಿತು. ಹಿಡಿದ ಕೆಲಸವನ್ನು ಅವನು ಕೊಸೆಗಾಣಿಸದೆ ಬಿಡುವವನಾಗಿರಲಿಲ್ಲ. ಆ ಕಾಲದಲ್ಲಿ ಅವನು 'ಹೇವರ್ಡ್' ಎಂಬಾತನೊಡನೆ ಸೇರಿ ಒಂದು 'ಕಂಪನಿ'ಯನ್ನು ಪ್ರಾರಂಭಿಸಿದನು. ಅನಂತರ ಗಂಧಕವನ್ನು ಮಿಶ್ರಮಾಡಿ ರಬ್ಬರನ್ನು ತಯಾರಿಸಿದನು. ಆಸಂಶೋಧನೆಯು ಹಿಂದಿನದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಿತು. ಆದರೆ ಅದೂ ಸಹ ಪೂರ್ತಿ ನಿರ್ದುಷ್ಟವಾಗಿರಲಿಲ್ಲ. ಅದೇ ಕಾಲದಲ್ಲಿ ಗುಡ್‌ಇಯರ್ ಪುನಃ ಸಾಲಕ್ಕೆ ಸಿಕ್ಕಿ ಕ್ಲೇಶಪಟ್ಟನು.

ಅದೇ ಕಾಲದಲ್ಲಿ ಗುಡ್‌ಇಯರನೂ ಅವನ ಸಹೋದರರಾದ 'ನೆಲ್ಸನ್' ಮತ್ತು 'ರಾಬರ್ಟ್' ಎಂಬಿಬ್ಬರೂ ಒಂದು ದಿನ ಸಂಜೆ ಒಲೆಯ ಮುಂದೆ ಕಾಯಿಸಿಕೊಳ್ಳುತ್ತ ಕುಳಿತ್ತಿದ್ದರು.

ನೆಲ್ಸನನು, "ಈ ಹಾಳು ರಬ್ಬರಿನ ಹವ್ಯಾಸವನ್ನೇ ಬಿಟ್ಟುಬಿಟ್ಟರೆ ಕ್ಷೇಮ" ಎಂದನು.

ರಾಬರ್ಟ್: "ಅದೇನೋ ನಿಜವೆ."

ಗುಡ್‌ಇಯರ್: "ನನ್ನ ಭಾವನೆಯೇ ನಿಮಗೆ ತಿಳಿದಿಲ್ಲ. ರಬ್ಬರು ಎಲ್ಲರಿಗೂ ಪ್ರಯೋಜನಕರವಾಗುವಂತೆ ಮಾಡುವುದೇ ನನ್ನ ಉದ್ದೇಶ. ದೇವರೇ ನನಗೆ ಆ ಕೆಲಸವನ್ನು ವಹಿಸಿದ್ದಾನೆ. ಅದನ್ನು ನೆರವೇರಿಸಿಯೇ ನೆರವೇರಿಸುತ್ತೇನೆ."

ರಾಬರ್ಟ್: "ಅದೆಲ್ಲಾ ಸರಿಯಯ್ಯ! ನೀನು ಈಗ ತೀರಿಸಬೇಕಾಗಿರುವ ಸಾಲಕ್ಕೆ ಏನು ಉತ್ತರ ಹೇಳುತ್ತೀಯೆ ? ಸಾಲವನ್ನು ತೀರಿ ಕೊಡ

ದೆಂದೂ ದೇವರೇ ಹೇಳಿದ್ದಾನೆನ್ನು; ಆಗ ಅವರು ಏನನ್ನುತ್ತಾರೋ, ದೇವರು ಏನು ಮಾಡುತ್ತಾನೋ ನೋಡೋಣ.”

ಗುಡ್‌ಇಯರ್: “ಈ ಸಂಶೋಧನೆ ಜಯಪ್ರದವೇ ಆಗುತ್ತದೆ. ಯಾವ ನಿಮಿಷ, ಯಾವ ಕಡೆ ಸರಿಯಾದ ಉತ್ತರ ದೊರೆತೀತೋ ಹೇಳುವುದಕ್ಕಾಗದು. ಸ್ವಲ್ಪ ಕಾಲ ಬೇಕು; ತಾಳ್ಮೆ ಬೇಕು. ರಬ್ಬರಿನೊಡನೆ ಒಂದೊಂದೇ ವಸ್ತುವನ್ನು ಮಿಶ್ರಮಾಡುತ್ತ ಪರೀಕ್ಷಿಸಬೇಕು. ಇಗೋ ನೋಡಿ! ಈ ಚೂರುಗಳಲ್ಲಿ ಯಾವುದಾದರೂ ಸರಿಯಾದ ಮಾದರಿಯಾದರೂ ಆಗಬಹುದು.”

ನೆಲ್ಸನ್; (ತಲೆಯಲ್ಲಾಡಿಸಿ) “ನಿನ್ನನ್ನು ತಿದ್ದುವುದಕ್ಕೆ ದೇವರಿಗೂ ಸಾಧ್ಯವಿಲ್ಲ. ನಮ್ಮ ಪೂರ್ವಿಕರಂತೆ ನೀನೂ ಏಕೆ ವ್ಯಾಪಾರ ಮಾಡಿಕೊಂಡು ಸುಖವಾಗಿರಬಾರದು ? ಈ ಸಂಶೋಧನೆಯ ಕಷ್ಟ ಯಾಕೆ?”

ಗುಡ್‌ಇಯರ್‌ಗೆ ಕೋಪ ಬಂದಿತು. ತನ್ನನ್ನು ಯಾರೂ ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲವಲ್ಲಾ ಎಂದು ದುಃಖವೂ ಆಯಿತು. ಸಂತಾಪದ ಭರದಲ್ಲಿ ಅವನು ತನ್ನ ಕೈಯಲ್ಲಿದ್ದ ರಬ್ಬರು ಚೂರನ್ನು ಜೋರಾಗಿ ಎಸೆದನು. ಮರುಕ್ಷಣವೇ ಬೇಸರದಿಂದ ತಲೆಯಮೇಲೆ ಕೈಯಿಟ್ಟುಕೊಂಡು ಕುರ್ಚಿಯ ಮೇಲೆ ಕುಳಿತನು. ಕೆಲವು ನಿಮಿಷಗಳ ವರೆಗೆ ಯಾರೂ ಮಾತಾಡಲಿಲ್ಲ. ಅವನಿಗೆ ಬೇಸರವಾಯಿತೆಂದು ಅವನ ಸಹೋದರರು ಮೌನ ತಾಳಿದರು.

ಸ್ವಲ್ಪ ಹೊತ್ತಾದ ಮೇಲೆ ರಾಬರ್ಟ್: “ಏನೋ ಒಂದು ವಿಧವಾದ ವಾಸನೆ ಬರುತ್ತಿದೆ, ಅಲ್ಲವೆ ?” ಎಂದನು.

ನೆಲ್ಸನ್: “ಸರಿ ಗೊತ್ತೇ ಇದೆ. ಆ ದರಿದ್ರ ರಬ್ಬರಿನ ಚೂರು ಒಲೆಯಲ್ಲಿ ಬಿದ್ದಿತೇನೋ. ಅದರ ಸುಟ್ಟ ವಾಸನೆ ಇರಬೇಕು.”

ನೆಲ್ಸನನು ಎದ್ದುಹೋಗಿ ರಬ್ಬರ್ ಚೂರನ್ನು ಒಲೆಯಿಂದ ತೆಗೆದನು. ಪುನಃ ಅವನು ಅದನ್ನು ಎಸೆದು ಬಿಡುವುದರಲ್ಲಿದ್ದನು. ಕೂಡಲೆ ಗುಡ್ ಇಯರ್ ಅವನ ಕಡೆ ನೋಡಿ: “ತಡೆ! ತಡೆ!! ಎಲ್ಲಿ ಅದನ್ನು ನೋಡೋಣ” ಎಂದು ಆ ಚೂರನ್ನು ತೆಗೆದುಕೊಂಡು ನೋಡಿ: “ಭೇಷ್ ! ನೋಡಿದೆಯಾ ? ಇದು ಒಲೆಯ ಕಾವಿಗೆ ಗಟ್ಟಿಯಾಗಿದೆ. ಇನ್ನು ಚಳಿಯಲ್ಲೂ ಸೆಕೆಯಲ್ಲೂ ಒಂದೇ ರೀತಿ ಇರಬಹುದು” ಎಂದನು.



ರಬ್ಬರ್ ತೋಟಗಳಲ್ಲಿ ರಬ್ಬರು ಹಾಲನ್ನು ಶೇಖರಿಸುತ್ತಿರುವುದು

ನೆಲ್ಸನನು, "ಬಿಡಯ್ಯಾ ಸಾಕು ! ನಿನ್ನ ಭ್ರಾಂತಿಯೇ ನಿನಗೆ" ಎಂದನು.

ಆದರೆ ಅದು ಭ್ರಾಂತಿಯಾಗಿರಲಿಲ್ಲ. ಆ ಸಲ ಗುಡ್‌ಇಯರ್ ಹೇಳಿದುದು ನಿಜವೇ ಆಗಿದ್ದಿತು. ರಬ್ಬರು ಒಂದು ಸ್ತಿಮಿತ ರೂಪಕ್ಕೆ ಬರುವ ವಿಧಾನವು ಕೇವಲ ಅಕಸ್ಮಾತ್ತಾಗಿ ಗೋಚರಿಸಿದುದು ವಾಸ್ತವವಾಗಿದ್ದಿತು.

ಆದರೆ ಅಷ್ಟಕ್ಕೇ ಆ ಸಂಶೋಧಕನ ತೊಂದರೆಗಳೆಲ್ಲಾ ನಿವಾರಣೆಯಾಗಲಿಲ್ಲ. ಬೇರೆ ತುಂಡುಗಳನ್ನು ಬೆಂಕಿಯಲ್ಲಿ ಸುಟ್ಟಾಗ ಆ ರಬ್ಬರು ತುಂಡುಗಳು ಹಿಂದೆ ಬೆಂಕಿಯಲ್ಲಿ ಬಿದ್ದಿದ್ದ ತುಂಡಿನಂತೆಯೇ ರೂಪಾಂತರ ಪಡೆಯಲಿಲ್ಲ. ರಬ್ಬರು ಸರಿಯಾದಷ್ಟು ಗಟ್ಟಿಯಾಗಬೇಕಾಗಿದ್ದಲ್ಲಿ ಅದನ್ನು ತಯಾರಿಸುವಾಗ ಎಷ್ಟು ಗಂಧಕವನ್ನು ಸೇರಿಸಬೇಕು, ಎಷ್ಟು ಕಾಲ ಬೆಂಕಿಯಲ್ಲಿ ಕಾಯಿಸಬೇಕು, ಬೆಂಕಿಯ ಶಾಖವು ಎಷ್ಟಿರಬೇಕು—ಎಂಬ ಅಂಶಗಳನ್ನೆಲ್ಲಾ ಬಹಳ ತಾಳ್ಮೆಯಿಂದ ಕಂಡುಹಿಡಿಯಬೇಕಾಗಿದ್ದಿತು.

ಆ ವಿಚಾರಗಳನ್ನು ಕಂಡುಹಿಡಿಯುವುದಕ್ಕಾಗಿ ಅವನು ಒಂದು ಇಟ್ಟಿಗೆ ಗೂಡನ್ನು ಕಟ್ಟಿಸಿ ಅದರಲ್ಲಿ ಅನೇಕ ಪಾದರಕ್ಷೆಗಳನ್ನು ಹಾಕಿ ಸುಟ್ಟು ನೋಡಿದನು. ಆದರೆ ಅವೆಲ್ಲಾ ಪೂರ್ತಿ ಭಸ್ಮವಾದುವು. ಎರಡು ಮೂರು ಸಲ ಹೀಗೆ ಆಯಿತು. ಆ ವೇಳೆಗೆ ಗುಡ್‌ಇಯರ್ ಪೂರ್ತಿ ನಿರ್ಗತಿಕನಾಗಿದ್ದನು. ಸಂಶೋಧನೆಗಳನ್ನು ಮುಂದುವರಿಸುವುದಕ್ಕೆ ಇನ್ನೂ ಹೆಚ್ಚು ರಬ್ಬರನ್ನು ಸುಟ್ಟು ನೋಡಬೇಕಾಗಿದ್ದಿತು. ಅಕ್ಕಪಕ್ಕದ ಕಾರ್ಖಾನೆಯವರನ್ನು ಅದಕ್ಕೆ ಅವಕಾಶವನ್ನೂ ಸಹಾಯವನ್ನೂ ಕೊಡಬೇಕೆಂದು ಬೇಡಬೇಕಾಗಿ ಬಂದಿತು.

ಈ ಮಧ್ಯೆ ಫ್ಲಾರಿಡಾ ಪ್ರಾಂತದಲ್ಲಿ ಹಳದಿ ಜ್ವರವು ತಲೆದೋರಿತು. ಆದರಿಂದ ಗುಡ್‌ಇಯರನ ದೊಡ್ಡ ಮಗ, ಸಣ್ಣ ಮಗು, ತಮ್ಮ, ತಂದೆ, ಹೆಂಡತಿ-ಇವರೆಲ್ಲರೂ ಮೃತರಾದರು. ಪುನಃ ಗುಡ್‌ಇಯರನು ಸಾಲಗಾರನಾದನು. ಪುನಃ ಅವನು 'ಜೈಲಿಗೆ' ಹೋಗಬೇಕಾಯಿತು. ಆದರೂ ಆ ಕೃಶ ಮನುಷ್ಯನು ಬಗ್ಗಲಿಲ್ಲ. ಸಂಶೋಧನೆಯನ್ನು, ಅವಕಾಶವಾದ ಕೂಡಲೆ, ಮುಂದುವರಿಸಿದನು.

ಅನೇಕ ಪ್ರಯೋಗಗಳನ್ನು ನಡೆಯಿಸಿದ ಮೇಲೆ ರಬ್ಬರಿನ ತಯಾರಿಕೆಗೆ ಎಷ್ಟು ಉಷ್ಣಾಂಶವಿರಬೇಕು, ಎಷ್ಟು ಗಂಧಕ ಸೇರಿಸಬೇಕು–ಎಂಬ ವಿಚಾರ ಗಳು ದೃಢಪಟ್ಟುವು. ಅದು ನಡೆದುದು 1841 ನೆಯ ಇಸವಿಯಲ್ಲಿ. ಅಲ್ಲಿಂದ ಮುಂದೆ ಮೂರು ವರ್ಷಗಳ ಕಾಲ ಗುಡ್‌ಇಯರ್ ಇನ್ನೂ ಇತರ ಪ್ರಯೋಗಗಳನ್ನು ನಡೆಯಿಸಿ, ತನ್ನ ಸಂಶೋಧನೆಯ ಮೇಲಿನ ಪೂರ್ಣ ಹಕ್ಕನ್ನು ಸರ್ಕಾರದವರಿಂದ ಪಡೆದುಕೊಂಡನು. ಈ ಮಧ್ಯೆ 'ಹಾರೇಸ್ ಎಚ್. ಡೇ'ಯು ಆ ಸಂಶೋಧನೆಯನ್ನು ನಡೆಯಿಸಿದವನು ತಾನೇ ಎಂಬು ದಾಗಿ ಸಾಧಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಆ ಪ್ರಯತ್ನವು ಫಲಕಾರಿ ಯಾಗಲಿಲ್ಲ.

ಅನಂತರ ಗುಡ್‌ಇಯರ್ ತನ್ನ ಪ್ರಾಂತವಾದ 'ಕನೆಕ್ಟಿಕಟ್'ಗೆ ಹೋಗಿ, ತನ್ನ ಊರಿನಲ್ಲಿ ಸ್ವಂತ ಕಾರ್ಖಾನೆಯನ್ನು ಸ್ಥಾಪಿಸಿದನು. ಸ್ವಲ್ಪ ಕಾಲ ದೊಳಗಾಗಿ ರಬ್ಬರು ಸಾಮಾನುಗಳನ್ನು ತಯಾರಿಸುವ ಅನೇಕ ಕಾರ್ಖಾನೆ ಗಳೂ, ಆ ಸಾಮಾನುಗಳನ್ನು ತಯಾರಿಸುವ ಅನೇಕ 'ಕಂಪನಿ'ಗಳೂ ಹುಟ್ಟಿ ಕೊಂಡವು. ಅವುಗಳಲ್ಲೆಲ್ಲಾ ಚಳಿಗಾಲದಲ್ಲೂ ಬೇಸಗೆಯಲ್ಲೂ ಏಕರೀತಿ ಯಾಗಿರುವಂಥ ರಬ್ಬರು ಸಾಮಾನುಗಳು ತಯಾರಾಗಿ ಮಾರಾಟವಾಗು ತ್ತಿದ್ದುವು. ಆದರೆ ಅಂಥ ಒಳ್ಳೆಯ ಸಾಮಾನುಗಳು ತಯಾರಾಗಿ, ಮಾರಾಟಕ್ಕೆ ಬರುವುದಕ್ಕೆ ಗುಡ್‌ಇಯರನ ಅವಿಶ್ರಾಂತ ಶ್ರಮವೇ ಕಾರಣ. ಅವನು ಸಂತತವಾಗಿ ಪ್ರಯತ್ನಿಸಿ, ಕಾರ್ಖಾನೆಯಿಂದ ಕಾರ್ಖಾನೆಗೆ ಅಲೆದು, ಇನ್ನೂ ಇತರ ಸಂಶೋಧನೆಗಳನ್ನು ಹೇಗೆ ನಡೆಯಿಸಬಹುದೆಂಬುದನ್ನು ತೋರಿಸಿ ಕೊಟ್ಟನು. ಬಹು ಹೆಚ್ಚು ಗಂಧಕವನ್ನು ಸೇರಿಸಿ ಕೆಲವು ವಿಧಾನಗಳಿಂದ ರಬ್ಬರನ್ನು ತಯಾರಿಸಿದರೆ ಅದು ಮರದಷ್ಟು ಗಟ್ಟಿಯಾಗಿರುತ್ತದೆಂಬುದನ್ನು ತೋರಿಸಿಕೊಟ್ಟನು.

ಅಮೇರಿಕಾದಲ್ಲಿ ಗುಡ್‌ಇಯರನಿಗೆ ತನ್ನ ಸಂಶೋಧನೆಯ ಮೇಲೆ ಪೂರ್ತಿ ಹಕ್ಕು ದೊರೆಯಿತು. ಆದರೆ ಇಂಗ್ಲೆಂಡಿನಲ್ಲಿ 'ಹಾಂಕಾಕ್' ಎಂಬವನು ರಬ್ಬರಿನ ತಯಾರಿಕೆಯನ್ನು ಕಂಡುಹಿಡಿದವನೆಂದು ಅವನಿಗೆ ಆ ಹಕ್ಕು ದೊರೆಯಿತು. ಅದರಿಂದ ಗುಡ್‌ಇಯರ್‌ಗೆ ಇಂಗ್ಲೆಂಡಿನಲ್ಲಿ ಏನೂ ಸಂಪಾದನೆಯಾಗಲಿಲ್ಲ. ಅವನು ಫ್ರಾನ್ಸ್ ದೇಶಕ್ಕೆ ಹೋಗಿ ತನ್ನ ಸಂಶೋ

ಧನೆಯನ್ನು ಜನರಿಗೆ ತೋರಿಸಿದನು. ಆದರೆ ಅಲ್ಲಿಯೂ ಅವನೇ ನಿಜವಾದ ಸಂಶೋಧಕನೆಂದು ಜನ ಒಪ್ಪಲಿಲ್ಲ. ಸಾಲಗಾರನಾಗಿ ಗುಡ್‌ಇಯರ್ ಫ್ರಾನ್ಸ್ ದೇಶದಲ್ಲೂ ಸ್ವಲ್ಪಕಾಲ 'ಜೈಲಿ'ನಲ್ಲಿರಬೇಕಾಯಿತು.

ಕಡೆಗೆ ಗುಡ್‌ಇಯರ್ ಯೂರೋಪಿನಿಂದ ಅಮೇರಿಕಕ್ಕೆ ವಾಪಸು ಬಂದನು. ಸ್ವಲ್ಪ ಕಾಲದೊಳಗಾಗಿ ಅವನ ಮಗಳು ಮೃತಳಾದಳು. ಶವ ಸಂಸ್ಕಾರಕ್ಕಾಗಿ ಗುಡ್‌ಇಯರ್ ಸ್ಮಶಾನದ ಕಡೆಗೆ ಹೋಗುತ್ತಿದ್ದಾಗ ಧೊಪ್ಪನೆ ಕೆಳಗೆ ಬಿದ್ದು ಮೃತನಾದನು. 1860 ರಲ್ಲಿ ಆತನು ಮೃತನಾದಾಗ ಅವನ ಬಳಿ ಒಂದು ಕಾಸೂ ಇರಲಿಲ್ಲ. ಸಾಲವು ಮಾತ್ರ 2 ಲಕ್ಷ ಡಾಲರುಗಳಷ್ಟು ಇದ್ದಿತು.

ಗುಡ್‌ಇಯರನು ಆಜೀವವೂ ದುಃಖವನ್ನೂ ಕಷ್ಟವನ್ನೂ ಅನುಭವಿಸಿದರೂ, ಸಂತತ ಪ್ರಯತ್ನದಿಂದ ರಬ್ಬರಿನಂಥ ಒಳ್ಳೆಯ ವಸ್ತುವಿನ ತಯಾರಿಕೆಯನ್ನು ಕಂಡುಹಿಡಿದನು. ಅವನು ಧನಕಾಂಕ್ಷೆಯಿಂದ ಕೆಲಸ ಮಾಡಲಿಲ್ಲ. ಮಾನವಕೋಟಿಗೇ ಅನುಕೂಲವಾಗಲೆಂದು ದುಡಿದು, ಮಡಿದನು. ಆದರೆ, ಪ್ರಪಂಚವು ಮಾತ್ರ ಈ ಪ್ರತಿಭಾಶಾಲಿಗೆ ಮೋಸವನ್ನೇ ಮಾಡಿದೆ. ರಬ್ಬರನ್ನು ಅದರ ಈಗಿನ ರೂಪದಲ್ಲಿ ಕಂಡುಹಿಡಿದವನು ಯಾರೆಂಬುದು ಇಂದಿಗೂ ಅನೇಕ ಜನರಿಗೆ ತಿಳಿದಿಲ್ಲ.

——

೬

# ಹಬೆಯ ಶಕ್ತಿ

"ಅಣ್ಣಾ, ಆ ಹೊಸ ಅಡಿಗೆಯ ಉಪಕರಣ ಹೇಗಿದೆ ?"

—ಪ್ರಶ್ನೆ ಕೇಳಿದವರು ಇಂಗ್ಲೆಂಡಿನ ಪ್ರಸಿದ್ಧ ವಿಜ್ಞಾನಿ ಪ್ರೊಫೆಸರ್ ಬಾಯಿಲ್‌ರವರ ತಂಗಿ ಲೇಡಿ ಕ್ಯಾತರೀನ್‌ರವರು. ಅಡಿಗೆ ಮಾಡುತ್ತಿದ್ದವರು ಸ್ವತಃ ಪ್ರೊಫೆಸರೇ. ನಾವು ನಿರೂಪಿಸುತ್ತಿರುವ ಘಟನೆಗಳು ನಡೆದುದು 1680 ನೆಯ ಇಸವಿಯಲ್ಲಿ. ಆ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಬಾಯಿಲ್ ರವರಷ್ಟು ಪ್ರಸಿದ್ಧರಾದ ವಿಜ್ಞಾನಿಗಳೇ ಇರಲಿಲ್ಲ. ಲಂಡನ್ನಿನ ಪಾಲ್‌ಮಲ್ ರಸ್ತೆಯ ತಮ್ಮ ಮನೆಯಲ್ಲಿ ಆ ದಿನ ಪ್ರೊಫೆಸರು ತಾವಾಗಿಯೇ ಅಡಿಗೆ ಮಾಡುವುದಕ್ಕೆ ತೊಡಗಿದ್ದುದೂ, ಅದನ್ನು ಲೇಡಿ ಕ್ಯಾತರೀನ್ ಕುತೂಹಲ ದಿಂದ ನೋಡುತ್ತ ನಿಂತದ್ದೂ ವಿಚಿತ್ರವಾಗಿಯೇ ಇದ್ದುವು. ಲೇಡಿ ಕ್ಯಾತರೀನ್ ಒಲೆಯ ಮೇಲಿದ್ದ ಉಪಕರಣವನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದರು. ಹೆಚ್ಚು ಕಡಮೆ ಒಂದು ಸಣ್ಣ ಯಂತ್ರದಂತೆಯೇ ಅದು ಕಾಣಿಸುತ್ತಿದ್ದಿತು. ನಿಜವಾಗಿ ಅದು ನೀರು ಕಾಯಿಸುವ ಒಂದು ಪಾತ್ರೆಯೇ ವಿನಾ ಯಂತ್ರ ವಾಗಿರಲಿಲ್ಲ. ಅದು ಕಬ್ಬಿಣದಿಂದ ಮಾಡಿದುದಾಗಿದ್ದಿತು. ಮುಚ್ಚಳವನ್ನು ಪಾತ್ರೆಗೆ ಬಿಗಿಯಾದ ಪಟ್ಟಿಗಳಿಂದ ಭದ್ರಪಡಿಸಿದ್ದಿತು. ಪಾತ್ರೆಯ ಮುಚ್ಚಳದ ಒಂದು ಮೂಲೆಯಲ್ಲಿದ್ದ ಸಣ್ಣ ಕಂಡಿಯಿಂದ ಹಬೆ ಹೊರಕ್ಕೆ ನುಗ್ಗುತ್ತಿದ್ದಿತು.

ಲೇಡಿ ಕ್ಯಾತರೀನ್ ಬಿರಡೆಯನ್ನು ತೆಗೆದು ವಾಸನೆ ನೋಡಿ, "ಭೇಷ್! ಇದೊಂದು ಹೊಸ ಬಗೆಯ ಅಡಿಗೆಪಾತ್ರೆಯೇ ಸರಿ. ಅಡಿಗೆ ಚೆನ್ನಾಗಿ ಆಗಿದೆ. ಈತ ಒಳ್ಳೆಯ ಉಪಕರಣವನ್ನೇ ತಯಾರಿಸಿದ. ಎಲ್ಲಿ, ಆ ಮನುಷ್ಯನನ್ನು ಕರೆ, ಊಟಕ್ಕೆ ಕುಳಿತುಕೊಳ್ಳೋಣ" ಎಂದರು.

ಆ ಪಾತ್ರೆಯನ್ನು ತಯಾರಿಸಿದ್ದವನು ಪ್ರೊಫೆಸರ್ ಬಾಯಿಲ್‌ರವರ ಪ್ರಯೋಗಶಾಲೆಯಲ್ಲಿ ಸಂಶೋಧನೆಗಳನ್ನು ನಡೆಯಿಸುತ್ತಿದ್ದ ಡೆನಿಸ್ ಪೇಪಿನ್ ಎಂಬ ಫ್ರೆಂಚರವನು.

ಪ್ರೊಫೆಸರು : "ಡೆನಿಸ್, ನೋಡಯ್ಯ! ನಿನ್ನ ಹೊಸ ಪಾತ್ರೆಯಲ್ಲೇ ಅಡಿಗೆ ಮಾಡಿದ್ದೇನೆ. ಸ್ವಲ್ಪ ರುಚಿ ನೋಡು, ಬಾ" ಎಂದು ಕರೆದರು.

ಏನೋ ಯೋಚನೆಮಾಡುತ್ತಿದ್ದ ಪೇಪಿ಼ ಎಚ್ಚತ್ತು, "ಚೆನ್ನಾಗಿ ಆಗಿದೆಯೆ ?" ಎನ್ನುತ್ತಾ ಬಂದು ಕುಳಿತನು. ಮೂವರೂ ಊಟ ಮಾಡಿದರು. ಅಡಿಗೆಯು ಚೆನ್ನಾಗಿದ್ದಿತು.

ಊಟವಾಗುತ್ತಿದ್ದಾಗ ಲೇಡಿ ಕ್ಯಾತರೀನರು : "ಅಯ್ಯಾ! ಪೇಪಿ಼, ಪ್ರೊಫೆಸರು ನೀನು ಹೇಳಿದಂತೆಯೇ ಅಡಿಗೆ ಮಾಡಿದ್ದಾರೆ. ಸಾಮಾನ್ಯವಾಗಿ ಈಗ ಹಾಕಿರುವಷ್ಟೇ ಪದಾರ್ಥಗಳಿಂದ ಅಡಿಗೆ ಏನೇನೂ ರುಚಿಸುತ್ತಿರಲಿಲ್ಲ. ನಿನ್ನ ಸೂಚನೆಯಿಂದ ಪಾಕವು ಚೆನ್ನಾಗಿ ಇಳಿದಿದೆ. ಅಡಿಗೆಯೂ ಬಹಳ ಬೇಗ ಆಗಿಯೋಯಿತು. ಇದರ ರಹಸ್ಯವೇನು ?" ಎಂದರು.

ಕೈಯಲ್ಲಿದ್ದ ಚಮಚವನ್ನು ಕೆಳಗಿಟ್ಟು ಪೇಪಿ಼ ವಿವರಿಸುವುದಕ್ಕೆ ಪ್ರಾರಂಭಿಸಿದನು : "ಪಾತ್ರೆಗೆ ಭದ್ರವಾಗಿ ಬಿರಡೆ ಹಾಕುವುದರಿಂದ ಹಬೆ ಒಳಗೇ ಇರುತ್ತದೆ. ಆದರ ಒತ್ತಡ ಹೆಚ್ಚಾಗುತ್ತದೆ. ನೀರು ಬಹಳ ಕಾವೇರುವವರೆಗೆ ಅದನ್ನು ಕುದಿಸಬೇಕು. ಆಗ ಪಾತ್ರೆಯೊಳಗೆ ಹಾಕಿರುವ ಪದಾರ್ಥಗಳು ನೀರಿನಲ್ಲೂ ಹಬೆಯಲ್ಲೂ ಚೆನ್ನಾಗಿ ಪಕ್ವವಾಗುತ್ತವೆ. ಅವುಗಳ ಸಾರವೆಲ್ಲಾ ಇಳಿದು ನೀರಿನಲ್ಲಿ ಬೆರೆಯುತ್ತದೆ. ಆದುದರಿಂದಲೇ ಅಡಿಗೆಯು ರುಚಿಕಟ್ಟಾಗಿರುತ್ತದೆ. ಆದರೆ ಈ ಪಾತ್ರೆಯನ್ನು ಮೊಟ್ಟಮೊದಲು ಕಂಡುಹಿಡಿದವನು ನಾನಲ್ಲ. ಏಕೆಂದರೆ ಹಬೆಯ ವಿಚಾರದಲ್ಲಿ ಸಂಶೋಧನೆ ನಡೆಯಿಸೆಂದು ಸೂಚನೆ ಕೊಟ್ಟವರು ಪ್ರೋಫೆಸರ್ ಬಾಯಿಲ್‌ರವರು. ಈ ಸಂಶೋಧನೆಯ ಕೀರ್ತಿಗೆ ಹೆಚ್ಚಾಗಿ ಅವರೇ ಬಾಧ್ಯರು. ಅವರು ಹೇಳಿದಂತೆ ಸಂಶೋಧನೆ ಮಾಡುತ್ತಿದ್ದಾಗ ಅಕಸ್ಮಾತ್ತಾಗಿ ಇದನ್ನು ತಯಾರಿಸಿದೆ."

ಪೇಪಿ಼ ಹೀಗೆಲ್ಲಾ ವಿವರಿಸುತ್ತಿದ್ದಾಗ ಊಟ ಮುಗಿಸಿದ ಪ್ರೊಫೆಸರು ತಮ್ಮ ತಟ್ಟೆಯನ್ನು ಒತ್ತಟ್ಟಿಗೆ ತಳ್ಳಿ, "ಪೇಪಿ಼, ನಿನ್ನ ಪಾತ್ರೆಯಲ್ಲಿ ಒಂದು ದೋಷವಿದೆ. ಹಬೆಯು ಶಾಖದಿಂದ ಬಹಳಮಟ್ಟಿಗೆ ವಿಕಾಸವಾಗಬಲ್ಲುದು. ಪಾತ್ರೆಯೊಳಗಿನ ಹಬೆಯು ತುಂಬಾ ವಿಕಾಸವಾದರೆ, ಅದರ ಒತ್ತಡದಿಂದ ಬಿರಡೆಯು ಕಿತ್ತು ಹೋಗಬಹುದು ; ಇಲ್ಲವೆ ಪಾತ್ರೆಯೇ ಚೂರು ಚೂರಾಗಿ

ಸಿಡಿಯಬಹುದು. ಹಾಗಾದಲ್ಲಿ, ಪಕ್ಕದಲ್ಲಿರುವವರಿಗೆ ಬಹಳ ಅಪಾಯ. ಇದನ್ನು ಯೋಚಿಸಿರುವೆಯಾ ?" ಎಂದರು.

ಲೇಡಿ ಕ್ಯಾತರೀನ್ ಗಾಬರಿಯಿಂದ : "ಅಯ್ಯೋ! ಹಾಗೇನು ?" ಎಂದರು.

ಪೇಪಿನ್ : "ನನ್ನ ಎಣಿಕೆಯಂತೆ ಹಾಗೆಲ್ಲಾ ಆಗಲಾರದು. ಸುಮ್ಮನೆ ಯೋಚಿಸುತ್ತ ಹೋದರೆ ಏನೇನೋ ಆಗಬಹುದೆಂದು ತೋರುವುದು ಸಹಜ. ಹಬೆಯ ವಿಚಾರವೆಲ್ಲಾ ನನಗೆ ತಿಳಿದುಬಿಟ್ಟದೆಯೆ ? ಇಲ್ಲ. ಸದ್ಯಕ್ಕೆ ಈ ಪಾತ್ರೆಯ ರಚನೆಯನ್ನು ಇನ್ನೂ ಸ್ವಲ್ಪ ಉತ್ತಮಪಡಿಸಬೇಕು. ಒಂದು ವೇಳೆ........"

ಪೇಪಿನ್ ಇನ್ನೂ ಏನೋ ಹೇಳುವುದರಲ್ಲಿದ್ದವನು ಹಠಾತ್ತನೆ ಮಾತನ್ನು ನಿಲ್ಲಿಸಿ ಯೋಚಿಸುವುದಕ್ಕೆ ಪ್ರಾರಂಭಿಸಿದನು. ಅನಂತರ ಒಂದೆರಡು ನಿಮಿಷಗಳಾದ ಮೇಲೆ ಪುನಃ ಮಾತನ್ನು ಮುಂದುವರಿಸಿದನು : "ಹಬೆ ಹೋಗುವುದಕ್ಕೆ ಈಗ ಒಂದು ಸಣ್ಣ ಕಂಡಿಯಿದೆ. ಇದರ ಜೊತೆಗೆ ಪಾತ್ರೆಯಲ್ಲಿ ತಾನಾಗಿಯೇ ಮುಚ್ಚಿತೆರೆಯುವಂಥ ಇನ್ನೊಂದು ಕದವನ್ನಿಡುತ್ತೇನೆ. ಅದರ ಮೂಲಕ ಹೆಚ್ಚಿಗೆ ಹಬೆಯು ಹೊರಟು ಹೋಗುವುದರಿಂದ ಯಾವ; ಅಪಾಯವೂ ಇರುವುದಿಲ್ಲ.''

ಬಾಯಿಲ್‌ರವರಿಗೆ ಆ ಸಲಹೆಯು ಒಳ್ಳೆಯದೆಂದು ತೋರಿತು. ಅವರು "ಭೇಷ್, ಒಳ್ಳೆಯ ಉಪಾಯ. ಆ ಕದವನ್ನೂ ಜೋಡಿಸಿ ಪಾತ್ರೆಯನ್ನು ತಯಾರಿಸು. ಆಮೇಲೆ ಅದನ್ನು 'ರಾಯಲ್ ಸೊಸೈಟಿ' ಯವರಿಗೆ ತೋರಿಸೋಣ. ಅಡಿಗೆಪಾತ್ರೆಯೂ ಒಂದು ಸಂಶೋಧನೆಯೆಂದರೆ 'ಸೊಸೈಟಿ' ಯವರು ನಕ್ಕರೂ ಆಶ್ಚರ್ಯವಿಲ್ಲ" ಎಂದರು.

ಪೇಪಿನ್ನನು : "ಅದಿರಲಿ. ಈ ಉಪಕರಣವನ್ನು ತಯಾರಿಸಿದಂತೆಯೇ ಮುಂದೆ ದೊಡ್ಡ ಹಬೆಯಂತ್ರವನ್ನು ತಯಾರಿಸಬಹುದೆಂಬ ಭರವಸೆಯೂ ಇದೆ'' ಎಂದನು.

ಪೇಪಿನ್ನನ ಅಡಿಗೆ ಉಪಕರಣವನ್ನು ಕೆಲವು ದಿನಗಳ ಅನಂತರ 'ರಾಯಲ್ ಸೊಸೈಟಿ' ಎಂಬ ವಿಜ್ಞಾನ ಧುರೀಣರ ಮಂಡಲಿಯವರ

ಗಮನಕ್ಕೆ ತಂದುದಾಯಿತು. ಅದು ನಡೆದುದು ಹೀಗೆ: ಪೇಪಿನ್ನನು ಆ ಮಂಡಲಿಯ ಸದಸ್ಯರನ್ನೆಲ್ಲಾ ಒಂದು ದಿನ ಭೋಜನಕೂಟಕ್ಕೆ ಕರೆದು, ಆ ಸಮಾರಂಭದಲ್ಲಿ ಬಡಿಸಿದ ಪದಾರ್ಥಗಳನ್ನೆಲ್ಲಾ ತನ್ನ ಉಪಕರಣ ದಿಂದಲೇ ತಯಾರಿಸಿದ್ದನು. ವಿಜ್ಞಾನಿಗಳಿಗೆ ಅಂದಿನ ಅಡಿಗೆಯು ರುಚಿಕಟ್ಟಾಗಿ ದ್ದಿತೆಂದು ಕಂಡಿತು. ಆಮೇಲೆ ಆ ಅಡಿಗೆಉಪಕರಣವನ್ನು ಸಾಮಾನ್ಯ ಜನರು ಬಳಸುವುದು ಪ್ರಾರಂಭವಾಯಿತು. ಆ ಕಾಲದಿಂದ ಈಚೆಗೆ ಅದರಂತೆ ಇನ್ನೂ ಅನೇಕ ಸಲಕರಣೆಗಳು ತಯಾರಾಗಿದ್ದರೂ, ಪೇಪಿನ್ನನು ತಯಾರಿಸಿದಂಥ ಉಪಕರಣಗಳು ಇಂದಿಗೂ ಬಳಕೆಯಲ್ಲಿವೆ.

ವಿಜ್ಞಾನಿಗಳಿಗೆ ತನ್ನ ಉಪಕರಣವನ್ನು ತೋರಿಸಿದ ಪೇಪಿನ್ನನು ಲಂಡನ್ನಿಗೆ ಹಿಂದಿರುಗಿದನು. ದೇಶವಿದೇಶಗಳನ್ನು ನೋಡಬೇಕೆಂದು ಅವನಿಗೆ ಮನಸ್ಸಾಯಿತು. ಅವನು ಕೆಲವು ಕಾಲ ವೆನಿಸ್‌ನಗರದಲ್ಲಿ 'ಸಾರೊಟ್ಟಿ' ಎಂಬ ಭೌತ ವಿಜ್ಞಾನಿಯೊಡನೆ ಕೆಲಸ ಮಾಡಿದನು. ಆದರೆ ಹಬೆಯಂತ್ರ ವನ್ನು ತಯಾರಿಸುವ ಕೆಲಸವು ಅಲ್ಲೂ ಹೆಚ್ಚು ಮುಂದುವರಿಯಲಿಲ್ಲ. ಪೇಪಿನ್ ಲಂಡನ್ನಿಗೆ ಹಿಂತಿರುಗಿ, ಹಬೆಯ ವಿಚಾರದಲ್ಲೂ ಉಷ್ಣದ ವಿಚಾರ ದಲ್ಲೂ ಇನ್ನೂ ಕೆಲವು ಬೇರೆ ಸಂಶೋಧನೆಗಳನ್ನು ಮಾಡಿದನು. 'ರಾಯಲ್ ಸೊಸೈಟಿ'ಯವರು ಅವನನ್ನು ತಮ್ಮ ಸಂಘದ 'ಕ್ಯೂರೇಟರ್' ಸ್ಥಾನಕ್ಕೆ ನೇಮಿಸಿದರು.

ಪೇಪಿನ್ನನು ತಾನು ಕೇವಲ ವಿಜ್ಞಾನಿಯೆಂದೂ, ರಾಜರು, ರಾಜಕೀಯ ಮೊದಲಾದ ವಿಚಾರಗಳಿಗೂ ತನಗೂ ಸಂಬಂಧವಿಲ್ಲವೆಂದೂ ಭಾವಿಸಿದ್ದನು. ಆದರೆ ಲೌಕಿಕ ವ್ಯವಹಾರವು ಅಕಸ್ಮಾತ್ತಾಗಿ ಅವನಿಗೂ ಗಂಟುಬಿದ್ದಿತು. ಆಗ್ಗೆ ನೂರು ವರ್ಷಗಳಿಗೆ ಹಿಂದೆ, ಫ್ರಾನ್ಸ್ ದೇಶದ ದೊರೆಯು, 'ಹ್ಯೂಗೆ ನಾಟ್ಸ್' ಪಂಗಡದವರು ಯಾವ ಆತಂಕವೂ ಇಲ್ಲದೆ ತಮ್ಮ ಮತಾಚಾರ ಪದ್ಧತಿಗಳಂತೆ ನಡೆದುಕೊಳ್ಳಬಹುದೆಂದು ಅವರಿಗೆ ಆ ವಿಚಾರದಲ್ಲಿ ಸ್ವಾತಂತ್ರ್ಯವನ್ನು ಕೊಟ್ಟಿದ್ದನು. ಪೇಪಿನ್ನನು ಆ ಪಂಗಡದವನು. ಪೇಪಿನ್ನನು ಲಂಡನ್ನಿಗೆ ಹಿಂದಿರುಗುವ ವೇಳೆಗೆ ಸರಿಯಾಗಿ ಫ್ರೆಂಚ್ ದೊರೆಯು 'ಈಡಿಕ್ಟ್ ಆಫ್ ನಾಂಟೀಸ್' ಎಂದು ಪ್ರಸಿದ್ಧವಾಗಿದ್ದ ಆ ರಾಜಶಾಸನ ಪತ್ರಿಕೆಯನ್ನು ವಾಪಸು ತೆಗೆದುಕೊಂಡನು. ಆದುದರಿಂದ ಪೇಪಿನ್ನನು ಫ್ರಾನ್ಸಿಗೆ

ಹಿಂದಿರುಗುವುದು ಸಾಧ್ಯವಿಲ್ಲದೆ ಹೋಯಿತು. ಆಗ ಸ್ವಾತಂತ್ರ್ಯ, ಜೀವಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಫ್ರಾನ್ಸಿನಿಂದ ತಲೆ ತಪ್ಪಿಸಿಕೊಂಡು ಹೋದ ಸಾವಿರಾರು ಮಂದಿ 'ಹ್ಯೂಗೆನಾಟ್ಸ್' ನಿರಾಶ್ರಿತರ ಸ್ಥಿತಿಯೇ ಪೇಪಿನ್ನನದೂ ಆಯಿತು.

ಹೀಗೆ ಪೇಪಿನ್ನನ ಜೀವಮಾನದಲ್ಲಿ ಒಂದು ಸಂದಿಗ್ಧವೊದಗಿತು. ಆಗ ಜರ್ಮನಿಯ 'ಲ್ಯಾಂಡ್‌ಗ್ರೇವ್ ಕಾರ್ಲ್' ಎಂಬ ಪಾಳೆಯಗಾರನು ಮಾರ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕನಾಗೆಂದು ಪೇಪಿನ್ನನಿಗೆ ಅವಕಾಶ ಕೊಟ್ಟನು. ಪೇಪಿನ್ನನು ಆ ಅವಕಾಶವನ್ನು ಕಳೆದುಕೊಳ್ಳಲಿಲ್ಲ. ವಿದ್ಯಾಪಕ್ಷಪಾತಿಯಾದ ರಾಜನ ಬೆಂಬಲವಿರಬೇಕಾದರೆ ತಾನು ವಿಜ್ಞಾನ ಸಂಶೋಧನೆಗಳನ್ನು ನಡೆಯಿಸಿ ಅವು ಜನರಿಗೆ ಉಪಯೋಗಕರವಾಗುವಂತೆ ಮಾಡಬಹುದೆಂದು ಪೇಪಿನ್ನನು ನಂಬಿದನು. ಆದರೆ ವಾಸ್ತವವಾಗಿ ಆ ದೊರೆಯು ಕೇವಲ ಒಣಪ್ರತಿಷ್ಠೆಯಿಂದ ತನ್ನನ್ನು ನೇಮಕ ಮಾಡಿದ್ದನೇ ವಿನಾ, ನಿಜವಾಗಿ ಅವನಿಗೆ ಪ್ರಗತಿಪರ ವಿಚಾರಗಳಲ್ಲಿ ಆಸಕ್ತಿಯಿರಲಿಲ್ಲವೆಂದು ಪೇಪಿನ್ನನಿಗೆ ಹೊಳೆಯಲಿಲ್ಲ. ವಿಜ್ಞಾನಿಗಳನ್ನು ಸುಲಭ ಸಂಬಳಕ್ಕೆ ನೇಮಕಮಾಡಬಹುದಾಗಿದ್ದಾಗ, ತಾನೂ ಒಬ್ಬನನ್ನು ನೇಮಿಸಿದರೆ ಇತರ ಪಾಳೆಯಗಾರರ ಮಧ್ಯೆ ತನ್ನ ಪ್ರತಿಷ್ಠೆ ಉಳಿದಂತಾಗುವುದೆಂಬುದು ಆ ದೊರೆಯ ಎಣಿಕೆಯಾಗಿದ್ದಿತು.

ಮಾರ್ಬರ್ಗಿಗೆ ಹೋದಾಗ ಪೇಪಿನ್ನನಿಗೆ ನಿಜಸ್ಥಿತಿಯು ಚೆನ್ನಾಗಿ ತಿಳಿಯಿತು. ಸಂಶೋಧನೆಯ ಕೆಲಸಕ್ಕೆ ಬೇಕಾದ ಒಂದೊಂದು ಸಣ್ಣ ಉಪಕರಣವನ್ನು ಪಡೆದುಕೊಳ್ಳುವುದಕ್ಕೂ ಅವನು ಬಹಳ ಹೆಣಗ ಬೇಕಾಯಿತು. ವೈಜ್ಞಾನಿಕ ಸಂಶೋಧನೆಗಳ ವಿಚಾರದಲ್ಲಿ ಆ ರಾಜನ ಪರಿವಾರದಲ್ಲಿ ಸಹ ಯಾರಿಗೂ ಆಸಕ್ತಿಯಿರಲಿಲ್ಲ. ಆದರೂ ಸಹ ಮುಂದಿನ ಕೆಲವು ವರ್ಷಗಳಲ್ಲಿ ಬಹಳ ಶ್ರಮವಹಿಸಿ ಪೇಪಿನ್ನನು ಸಂಶೋಧನೆಗಳನ್ನು ನಡೆಯಿಸಿ, ಸಣ್ಣ ಆಕಾರದಲ್ಲಿ ಹಲವು ಯಂತ್ರಗಳನ್ನು ರಚಿಸಿದನು. ಅವುಗಳಲ್ಲಿ ಅತ್ಯಂತ ಮುಖ್ಯವಾದುದು, ಹಬೆಯಂತ್ರ. ಗಾಳಿಯನ್ನೆಳೆಯುವ 'ಸರ್ಕ್ಷನ್' ಪಂಪನ್ನು ತನ್ನ ಅಡಿಗೆ ಉಪಕರಣಕ್ಕೆ ಜೋಡಿಸಿ ಅವನು ಆ ಹಬೆಯಂತ್ರವನ್ನು ತಯಾರಿಸಿದನು.

ಅದೆಂತಾದರೂ ಇರಲಿ. ಪೇಪಿನ್ನನಿಗಂತೂ ಯಶಸ್ಸಾಗಲಿ, ಕೀರ್ತಿಯಾಗಲಿ ಲಭಿಸಲಿಲ್ಲ. ಮಾರ್ಬರ್ಗಿನಲ್ಲಿ ಜೀವನವು ದಿನೇದಿನೇ ದುಸ್ತರವಾಗುತ್ತ ಬಂದಿತು. ಬಹಳ ದುಡಿಮೆಯಿಂದ ಆತನು ತನ್ನ ಹಬೆಯಂತ್ರದ ಪುಟ್ಟ ಮಾದರಿಯೊಂದನ್ನು ತಯಾರಿಸಿದನು. ಕೆಲಸಕ್ಕೆ ಅದು ಅನುಕೂಲವಾಗಿದ್ದಿತೆಂದೂ, ಆದರೆ ಇನ್ನೂ ಕೆಲವು ಮಾರ್ಪಾಟುಗಳಾಗುವುದು ಒಳ್ಳೆಯದೆಂದೂ ಪೇಪಿನ್ ಪ್ರಯೋಗದಿಂದ ತೋರಿಸಿಕೊಟ್ಟನು. ಪ್ರಯೋಗಗಳನ್ನು ನಡೆಯಿಸುವುದಕ್ಕಾಗಿ ಲ್ಯಾಂಡ್‌ಗ್ರೇವ್ನನಿಂದ ಇನ್ನು ಸ್ವಲ್ಪವೂ ಹಣ ದೊರೆಯುವಂತಿರಲಿಲ್ಲ. ಆ ವೇಳೆಗಾಗಲೇ ಪೇಪಿನ್ನನಿಗೆ ಮದುವೆಯಾಗಿ, ಮಕ್ಕಳು ಮರಿಗಳೂ ಆಗಿದ್ದುವು. ಆದುದರಿಂದ ತನ್ನ ಕೆಲಸವನ್ನು ಮುಂದುವರಿಸುವುದಕ್ಕಾಗಿ ಇಂಗ್ಲೆಂಡಿಗೆ ಹಿಂದಿರುಗಬೇಕೆಂದು ಆತನು ಆಲೋಚಿಸಿದನು. ಲಾಂಡ್ಸ್‌ಗ್ರೇವ್ಸ್ ಪಾಳೆಯಗಾರನು ಕರುಣೆಯಿಂದ ಅದಕ್ಕಾದರೂ ಒಪ್ಪಿದನು. ಪೇಪಿನ್ ಒಂದು ಉಪಾಯ ಹೂಡಿ ತನ್ನ ಸಂಶೋಧನೆಯು ಆಗಿನ ಕಾಲದ ಜನರ ಗಮನವನ್ನು ಸೆಳೆಯುವಂತೆ ಮಾಡಿದನು. ಮೊದಲು ಅವನು ಒಂದು ದೋಣಿಯನ್ನು ತಯಾರಿಸಿದನು. ಹುಟ್ಟುಗಳ ಸಹಾಯದಿಂದ ಅದನ್ನು ನಡೆಯಿಸಬಹುದಾಗಿದ್ದಿತು. ಆ ದೋಣಿಗೆ ಒಂದು ಹಬೆಯಂತ್ರವನ್ನು ಜೋಡಿಸಿದನು. ಅನಂತರ ಹಬೆಯಂತ್ರದ ಉಪಯೋಗವನ್ನು ಗಮನಿಸದೆಹೋದ ಜನರು ತಮ್ಮ ದಡ್ಡತನವನ್ನು ತಿಳಿಯಲೆಂದು ಪೇಪಿನ್ನನು, ತಾನೂ ತನ್ನ ಕುಟುಂಬದವರೂ ಆ ದೋಣಿಯಲ್ಲಿ ಕ್ಯಾಸಲ್ ಮತ್ತು ಫುಲ್ಡಾ ನದಿಗಳನ್ನು ದಾಟಿ ಹೋಗಿ, ವೀಸರ್ ನದಿಯ ಮುಖಾಂತರ ಹಾಲೆಂಡಿನ ತೀರವನ್ನು ತಲುಪಿ, ಅಲ್ಲಿಂದ ಇಂಗ್ಲಿಷ್ ಕಡಲ್ಗಾಲುವೆಯ ಮಾರ್ಗವಾಗಿ ಲಂಡನ್ನನ್ನು ತಲಪಬೇಕೆಂದು ಹವಣಿಸಿ ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತಿದ್ದನು.

ಆ ಹುಚ್ಚ ಅಧ್ಯಾಪಕನ ಹಗರಣವೇನಾಗುವುದೋ ನೋಡೋಣವೆಂದು ಕ್ಯಾಸಲ್ ಪಟ್ಟಣದವರೆಲ್ಲಾ ಕುತೂಹಲಿಗಳಾದರು. ಲ್ಯಾಂಡ್‌ಗ್ರೇವ್ ಪಾಳೆಯಗಾರನೂ ಸಹ ನದಿಯ ತೀರಕ್ಕೆ ಬಂದು ಶುಭಾಶಯ ಕೋರಿದನು. ಪೇಪಿನ್ ತಾನು ಯಾವ ಯಾವ ದೇಶಗಳ ಮಾರ್ಗವಾಗಿ ಪ್ರಯಾಣ ಮಾಡಬೇಕಾಗಿದ್ದಿತೋ ಆ ಸ್ಥಳಗಳಲ್ಲೆಲ್ಲಾ ತಾನು ತೋರಿಸಬೇಕಾಗಿದ್ದ

ಕಾಗದಪತ್ರಗಳನ್ನು ಎಚ್ಚರಿಕೆಯಿಂದ ತೆಗೆದಿಟ್ಟುಕೊಂಡಿದ್ದನು. ಲ್ಯಾಂಡ್ ಗ್ರೇವನ ಸರ್ಕಾರದವರು, ಅವನು ತಮ್ಮ ನಾಡಿನಲ್ಲಿ ಯಾವ ತೆರಿಗೆಯನ್ನೂ ಸುಂಕವನ್ನೂ ಕೊಡದೆ ಜಲಮಾರ್ಗವಾಗಿ ಪ್ರಯಾಣ ಮಾಡಬಹುದೆಂದು ಅನುಮತಿ ಕೊಟ್ಟಿದ್ದರು.

ಫುಲ್ಡಾ ನದಿಯನ್ನು ಸುಗಮವಾಗಿ ದಾಟಿದುದಾಯಿತು. ಫುಲ್ಡಾ ಮತ್ತು ವೆರ್ರಾ ನದಿಗಳು ಸೇರಿ ವೀಸಾ ನದಿಯೆಂಬ ಹೆಸರಿನಿಂದ ಒಂದೇ ನದಿಯಾಗಿ ಹರಿಯುವ ಸಂಗಮಸ್ಥಾನದಲ್ಲಿ ಮುಂಡೆನ್ ಪಟ್ಟಣವಿದೆ. ಆ ಮಹಾ ನಗರವೂ ದೂರದಲ್ಲಿ ಕಾಣಿಸಿತು. ಆ ನಗರದ 'ದೋಣಿಯವರ ಸಂಘ'ದ ನೌಕರನೊಬ್ಬನು, ಪೇಪಿನ್ ನಗರವನ್ನು ಪ್ರವೇಶಿಸುವಾಗ ಎದುರಿಗೆ ಬಂದನು. ಪೇಪಿನ್ನನ ವಿಚಿತ್ರ ದೋಣಿಯನ್ನು ಅವನು ತಡೆದನು. ಪೇಪಿನ್ನನು ತನ್ನ ಕಾಗದ ಪತ್ರಗಳನ್ನು ತೋರಿಸಿದನು. ಆದರೆ ಪರದೇಶದಿಂದ ಬಂದು, ಜಲಮಾರ್ಗವಾಗಿ ಅಲ್ಲಿ ಸಂಚರಿಸತಕ್ಕ ಯಾರನ್ನಾಗಲಿ ತಡೆಯುವುದಕ್ಕೆ ಆ ದೋಣಿಯವನಿಗೆ ಅಧಿಕಾರವಿದ್ದಿತು. ಆ ಅಧಿಕಾರವಿದ್ದ ಆತನು ಪೇಪಿನ್ನನನ್ನು ಮುಂದಕ್ಕೆ ಬಿಡಲಿಲ್ಲ. ಪೇಪಿನ್ನನಿಗೆ ಬಹಳ ಕೋಪ ಬಂದು, ಹಾಗೆಯೇ ಮುನ್ನುಗ್ಗುವುದಕ್ಕೆ ಧೈರ್ಯವಾಗಿ ಪ್ರಯತ್ನಿಸಿದನು. ಆ ನೌಕರನು ಇತರರ ಸಹಾಯವನ್ನು ಪಡೆದುಕೊಂಡು, ಪೇಪಿನ್ನನ ದೋಣಿಯನ್ನು ವಶಪಡಿಸಿಕೊಂಡು, ಅದನ್ನು ನದಿಯತೀರಕ್ಕೆ ತಂದು ಮುಟ್ಟಿಸಿದನು. ದಾರಿಯುದ್ದಕ್ಕೂ ಪೇಪಿನ್ನನು ರೇಗುತ್ತಲೇ ಇದ್ದನು. ಅವನ ಕುಟುಂಬದವರು ಮುಂದೇನಾಗುವುದೋ ಎಂದು ನಡುಗುತ್ತಲೇ ಇದ್ದರು.

ಕೋಪಾಂಧನಾಗಿದ್ದ ಪೇಪಿನ್ ತನ್ನ ಬಳಿ ಇದ್ದ ದೋಣಿಯವನನ್ನು ಬಲವಾಗಿ ಹೊಡೆದನು. ಸ್ವಲ್ಪ ಹೊತ್ತಿನಲ್ಲೇ ದೋಣಿಯವರೆಲ್ಲಾ ಬಂದು, ಕುಡುಗೋಲುಗಳಿಂದ ಪೇಪಿನ್ನನ ವಿಚಿತ್ರ ದೋಣಿಯನ್ನು ಚೂರುಚೂರು ಮಾಡಿದರು.

ಪುನಃ ಹಿಂದಿನ ದುಃಸ್ಥಿತಿಯಲ್ಲೇ ಪೇಪಿನ್ ಲಂಡನ್ನಿಗೆ ಹಿಂದಿರುಗಿದನು. ತನ್ನ ಸಂಶೋಧನೆಯ ಕೆಲಸವನ್ನು ಮುಂದುವರಿಸುವುದಕ್ಕೆ ಮುಂಚಿತವಾಗಿ ಜೀವನೋಪಾಯಕ್ಕೆ ದಾರಿ ಮಾಡಿಕೊಳ್ಳಬೇಕಾಯಿತು. ಆದರೆ 'ರಾಯಲ್ ಸೊಸೈಟಿ' ಯವರು ಪುನಃ ಅವನನ್ನು 'ಕ್ಯೂರೇಟರ' ಸ್ಥಾನಕ್ಕೆ ನೇಮಿಸಿ

ಕೊಳ್ಳುವುದು ಸಾಧ್ಯವಿರಲಿಲ್ಲ. ಪೇಪಿನ್ನನಿಗೆ ಕಷ್ಟ ಪರಂಪರೆಗಳು ಬಂದುವು. ಐದು ವರ್ಷಗಳ ಕಾಲ ಕೆಲಸಕ್ಕಾಗಿ ಅವನು ಒದ್ದಾಡಬೇಕಾಯಿತು. ಅವನ ಕೊನೆಯ ದಿನಗಳು ಯಾವ ರೀತಿ ಮುಕ್ತಾಯವಾದುವೆಂಬುದು ಖಚಿತವಾಗಿ ತಿಳಿದು ಬಂದಿಲ್ಲ. ಅವನನ್ನು ಎಲ್ಲಿ ಸಮಾಧಿ ಮಾಡಿದರೋ ಅದೂ ತಿಳಿಯದು. ಆದರೆ ಕ್ಯಾಸಲ್ ಪಟ್ಟಣದವರು, ಅವನು ಮೊದಲನೆಯ ಬಾರಿ ದೋಣಿಯಲ್ಲಿ ಪ್ರಯಾಣ ಮಾಡಿದುದರ ಗುರುತಾಗಿ, ಅವನ ಶಿಲಾ ಪ್ರತಿಮೆಯನ್ನು ಮಾಡಿ ನಿಲ್ಲಿಸಿದರು. ಪ್ರತಿಮೆಯ ಕೈಯಲ್ಲಿ ಒಂದು ಹಬೆ ಹಡಗಿನ ಮಾದರಿಯ ಪುಟ್ಟ ವಿಗ್ರಹವಿದೆ.

ಪೇಪಿನ್ನನ ಕಾಲಾನಂತರ, ಅವನ ಸಂಶೋಧನೆಯನ್ನು ಇತರರು ಮುಂದುವರಿಸಿದರು. ಆ ಸಂಶೋಧನೆಯು ಹೇಗೆ ಮುಂದುವರಿಯಿತೆಂಬ ಕಥೆಯೂ ಸ್ವಾರಸ್ಯಕರವಾದುದು. 'ಜೋಸೆಫ್ ಬ್ಲಾಕ್' ಒಬ್ಬ ರಸಾಯನ ಶಾಸ್ತ್ರಜ್ಞ. ಅವನ ಸ್ನೇಹಿತನಾದ 'ಜಾನ್ ರಾಬಿಸನ್ನ'ನು ಅಧ್ಯಾಪಕ ನಾಗಿದ್ದನು. ಅವರಿಬ್ಬರೂ ಅಪರ ವಯಸ್ಸಿನಲ್ಲಿ ತಮ್ಮ ಯೌವನದ ದಿನಗಳ ವಿಚಾರಗಳನ್ನೆಲ್ಲಾ ಜ್ಞಾಪಿಸಿಕೊಳ್ಳುವಾಗ್ಗೆ, ತಾವು ಗ್ಲಾಸ್ಗೋ ಪಟ್ಟಣದಲ್ಲಿ ಒಮ್ಮೆ ಯಂತ್ರೋಪಕರಣಗಳ ಅಂಗಡಿಯೊಂದಕ್ಕೆ ಹೋಗಿದ್ದುದನ್ನು ಹೇಳಿಕೊಂಡು ಆಗಿಂದಾಗ್ಗೆ ಬಿದ್ದು ಬಿದ್ದು ನಗುವರು. ಆ ಅಂಗಡಿ ವಿಶ್ವ ವಿದ್ಯಾಲಯಕ್ಕೆ ಸೇರಿದುದಾಗಿದ್ದಿತು. ಆ ಕಾಲದಲ್ಲಿ ಬ್ಲಾಕ್ ಮತ್ತು ರಾಬಿರ್ಸ ಇನ್ನೂ ವಿದ್ಯಾರ್ಥಿಗಳಾಗಿದ್ದರು. ಆ ಅಂಗಡಿಯನ್ನು ವಿಚಿತ್ರವಾದ ಅಭಿ ಪ್ರಾಯಗಳಿದ್ದ ಒಬ್ಬ ಹುಚ್ಚಮನುಷ್ಯನು ನೋಡಿಕೊಳ್ಳುತ್ತಿದ್ದನೆಂಬ ಪ್ರತೀತಿ ಯಿದ್ದಿತು.

ಆ ಕಾಲದಲ್ಲಿ ಅವರು ಒಮ್ಮೆ ವಿನೋದಕ್ಕಾಗಿ ಆ ಮನುಷ್ಯನನ್ನು ಕೆಣಕಬೇಕೆಂದು ಅಂಗಡಿಗೆ ಹೋದರು.

ಅಂಗಡಿಗೆ ಹೋಗಿ ನೋಡಿದಾಗ ಸ್ನೇಹಿತರಿಬ್ಬರೂ ಆಶ್ಚರ್ಯದಿಂದ ಮೂಕರಾಗಿ ನಿಂತರು. ಅಂಗಡಿಯ ತುಂಬಾ ವಿಚಿತ್ರವಾದ ಸಾಮಾನು ಗಳು ಚಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ವಿಜ್ಞಾನ ಸಂಶೋಧನೆಗಳಿಗಾಗಿಯೇ ಅವುಗಳನ್ನೆಲ್ಲಾ ಇಟ್ಟುಕೊಳ್ಳಲಾಗಿದ್ದಿತೆಂದು ಸುಲಭವಾಗಿ ಊಹಿಸಬಹು

ದಾಗಿದ್ದಿತು. ಆದರೆ ಕೆಲವು ಸಾಮಾನುಗಳಿಗೆ ಏನೆಂದು ಹೆಸರು ಕೊಡ ಬೇಕೆಂಬುದೇ ತಿಳಿಯುವ ಹಾಗಿರಲಿಲ್ಲ.

ಅಂಗಡಿಯ ಮೂಲೆಯೊಂದರಲ್ಲಿ ಒಂದು ಮೇಜಿನ ಹಿಂದೆ ಒಬ್ಬ ಬಡಕಲು ಯುವಕನು ಕುಳಿತಿದ್ದನು. ಆ ಸ್ನೇಹಿತರಿಬ್ಬರೂ ಅಂಗಡಿಗೆ ಹೋದ ಕೂಡಲೇ ಆತನು ಎದ್ದು "ನಿಮಗೇನು ಬೇಕು ?" ಎಂದು ಕೇಳಿದನು. ಮಾತಿನ ರೀತಿಯಿಂದ ಅವನು ಸ್ಕಾಟ್ಲೆಂಡಿನವನೆಂದು ತಿಳಿಯುವಂತಿದ್ದಿತು. ಸಂಶೋಧಕರಿಗೆ ಇರತಕ್ಕುದಾದ ದೀರ್ಘ ಯೋಚನಾಯುಕ್ತವಾದ ಕಣ್ಣು ಗಳಿದ್ದುವು. ಭುಜಗಳು ಬಗ್ಗಿದ್ದುವು; ಎದೆ ಅಗಲ ಕಿರಿದಾಗಿದ್ದಿತು. ತಲೆಯೂ ಮುಂದೆ ಬಗ್ಗಿದ್ದಿತು; ಮೈ ಬಿಳಿಚಿಕೊಂಡಿದ್ದಿತು. ಅಂತೂ ಅವನೇನೂ ಅಷ್ಟೊಂದು ಆರೋಗ್ಯವಂತನೂ, ದೃಢಕಾಯನೂ ಅಲ್ಲವೆಂದು ಸುಲಭವಾಗಿ ಹೇಳಬಹುದಾಗಿದ್ದಿತು.

ಹಾಸ್ಯ ಮಾಡಬೇಕೆಂದು ಬಂದಿದ್ದ ರಾಬಿರ್ಸ ಏನೂ ಹೇಳುವುದಕ್ಕೆ ತೋಚದೆ ನಿಂತುಬಿಟ್ಟನು. ಬ್ಲಾಕ್ ಏನೋ ಹೇಳುವುದಕ್ಕೆ ಪ್ರಯತ್ನಿಸು ತ್ತಿದ್ದಂತೆ ಕಾಣಿಸುತ್ತಿದ್ದಿತು. ತಾವಿಬ್ಬರೂ ಯಾರೆಂದು ತಿಳಿಸಿ ಬ್ಲಾಕ್ ಸುಮ್ಮನಾದನು. ಆ ಯುವಕನು "ನಾನು ಜೇಮ್ಸ್ ವಾಟ್" ಎಂದು ವಿನಯದಿಂದ ಹೇಳಿದನು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಅನಂತರ ರಾಬಿರ್ಸಗೆ ಏನೋ ಹೊಳೆದು ಮಾತನ್ನು ಪುನಃ ಪ್ರಾರಂಭಿಸಿದನು. "ವಾಟ್‌ರವರೇ, ನೀವು ಸಂಗೀತದ ವಾದ್ಯಗಳನ್ನು ಸರಿಮಾಡುತ್ತೀರೆಂದು ಯಾರೋ ಹೇಳಿದರು. ನನ್ನದೊಂದು ಪಿಟೀಲು ಸ್ವಲ್ಪ ಕೆಟ್ಟಿದೆ. ಅದನ್ನು ತಮ್ಮಲ್ಲಿಗೆ ತರಬೇಕೆಂದಿದ್ದೇನೆ."

"ಆಗಲಿ ! ತನ್ನಿ ನೋಡೋಣ; ನೋಡಿ, ವಾದ್ಯಗಳನ್ನು ನಾನು ಸರಿಮಾಡುತ್ತೇನೆ, ನಿಜ; ಆದರೆ ನನಗಂತೂ ಸಂಗೀತವು ಸ್ವಲ್ಪವೂ ತಿಳಿಯದು. ಅದರಲ್ಲಿ ಅಭಿರುಚಿಯೂ ಇಲ್ಲ."

ಮೂವರೂ ನಕ್ಕರು. ಅಲ್ಲಿಗೆ ಹೇಗೂ ಪರಿಚಯವಾದಂತಾಯಿತು. ಹೊಸಬರಿಗೆ ತನ್ನ ಅಂಗಡಿಯನ್ನೆಲ್ಲಾ ವಾಟ್ ತೋರಿಸಿದನು. ಅಲ್ಲಿದ್ದ ಎಲ್ಲಾ ವಿಚಿತ್ರ ಸಾಮಾನುಗಳನ್ನೂ ಅವರಿಗೆ ವಿವರಿಸಿದನು.

ಕಡೆಗೆ ರಾಬಿಸನ್ನನು ವಾಟ್ ಇಟ್ಟುಕೊಂಡಿದ್ದ ಹಬೆಯುಂತ್ರವನ್ನು ತೋರಿಸಿ : "ಇದೇನು, ಅಡಿಗೆ ಉಪಕರಣದಂತಿದೆಯಲ್ಲಾ ?" ಎಂದನು.

"ಅದೇ ? ಅದು ಈಗ್ಗೆ ಐವತ್ತು ವರ್ಷಗಳ ಹಿಂದೆ ಒಬ್ಬ ಬಡಪಾಯಿ ಕಂಡುಹಿಡಿದ ಅಡಿಗೆ ಉಪಕರಣ. ನೀವೂ ಅವನ ಹೆಸರನ್ನು ಕೇಳಿರಬಹುದು. ಡೆನಿಸ್ ಪೇಪಿನ್ ಎಂದು ಆತನ ಹೆಸರು. ಅಷ್ಟು ವಿನಾ ಆತನ ವಿಚಾರ ಇನ್ನೇನೂ ತಿಳಿದುಬಂದಿಲ್ಲ. ನನ್ನ ಅಭಿಪ್ರಾಯದಲ್ಲಿ, ಆತನು ಅತ್ಯಂತ ಶ್ರೇಷ್ಠ ವಿಜ್ಞಾನಿಗಳ ಗುಂಪಿಗೆ ಸೇರಿದವನು. ಹಬೆಯಂತ್ರದ ವಿಚಾರವನ್ನು ಮೊಟ್ಟಮೊದಲು ತಿಳಿದವನೆಂದರೆ ಆತನೇ. ಅವನ ಪ್ರಯೋಗಗಳನ್ನೇ ಮುಂದುವರಿಸಿ ಸೇವರಿ ಎಂಬಾತನು ಹಬೆಪಂಪುಗಳನ್ನು ಮಾಡಿದನು. ಸೇವರಿ ಒಂದು ದೊಡ್ಡ ಕಾರ್ಖಾನೆಯನ್ನೇ ಕಟ್ಟಿದ. 'ಅಶ್ವಶಕ್ತಿ' ಎಂದರೆ ಎಷ್ಟು ಬಲವೆಂಬ ಪರಿಮಾಣವನ್ನು ತಿಳಿಸಿದುದು ಮಾತ್ರ ಸೇವರಿ ಕಂಡು ಹಿಡಿದುದು. 550 ಪೌಂಡುಗಳ ತೂಕವು ಒಂದು ಸೆಕೆಂಡಿನಲ್ಲಿ ಒಂದು ಅಡಿ ಮೇಲಕ್ಕೆ ಹೋಗಬೇಕಾದರೆ ಎಷ್ಟು ಶಕ್ತಿಯನ್ನು ಪ್ರಯೋಗಿಸಬೇಕೋ ಆ ಶಕ್ತಿಯ ಪರಿಮಾಣಕ್ಕೆ ಒಂದು 'ಅಶ್ವಶಕ್ತಿ'ಯೆಂದು ಹೆಸರು"—ಎಂದು ವಾಟ್ ವಿವರಿಸಿದನು. ಮತ್ತು ಅದೇ ವಿಚಾರವನ್ನು ಮುಂದುವರಿಸಿ : "ನಿಮಗೆ ಬೇಜಾರಾಗುವುದೇನೋ ! ನನಗಂತೂ ಈ ವಿಚಾರದಲ್ಲಿ ಬಹಳ ಆಸಕ್ತಿ. ನಾನು ಹದಿನೈದನೆಯ ವಯಸ್ಸಿನಲ್ಲಿ ಈ ಊರಿಗೆ ಬಂದು ಒಬ್ಬರು ನೆಂಟರ ಬಳಿ ವಾಸಿಸತೊಡಗಿದೆ. ಆಕೆ ನಮ್ಮ ಚಿಕ್ಕಮ್ಮ. ಪ್ರತಿ ಸಂಜೆಯೂ ಆಕೆಗೆ ದಿಗಿಲಾಗುವಂಥ ಕತೆಗಳನ್ನು ಲೆಕ್ಕವಿಲ್ಲದಷ್ಟು ಹೇಳುತ್ತಿದ್ದೆ" ಎಂದು ವಾಟ್ ಹೇಳಿದನು.

ಪುನಃ ಮೂವರೂ ನಕ್ಕರು. ಅನಂತರ ಬ್ಲಾಕ್ : "ಹೋಗಲಿ, ದೇವರ ದಯದಿಂದ ನನಗಂತೂ ಒಳ್ಳೆಯ ಗುಂಡಿಗೆಯೇನೋ ಇದೆ. ನಿಮ್ಮಂತೆಯೇ ನನಗೂ ಹಬೆಯಂತ್ರಗಳಲ್ಲಿ ಆಸಕ್ತಿಯುಂಟು. ನಿಮಗೆ ತಿಳಿದಿರುವುದನ್ನೆಲ್ಲಾ ಹೇಳಿ"—ಹೀಗೆಂದವನೇ ಬ್ಲಾಕ್ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತನು. ರಾಬಿಸನ್ನನೂ ಇನ್ನೊಂದು ಕುರ್ಚಿಯ ಮೇಲೆ ಕುಳಿತನು.

ವಾಟ್ ಸಂಶೋಧನೆಗಳ ವಿಚಾರಗಳನ್ನು ಹೇಳಲು ಪ್ರಾರಂಭಿಸಿದನು : "ನಾನು ಹೇಳುವುದರಲ್ಲಿ ಹೆಚ್ಚು ಭಾಗ ನಿಮಗೆ ಮೊದಲೇ ತಿಳಿದಿರಬಹು

ದೇನೋ ! ಸೇವರಿಯ ಯಂತ್ರದಲ್ಲಿ ಹಬೆಯು ತಣ್ಣಗಾಗುವುದು, ಅದರಿಂದ ಕೊಳಬೆಯೊಳಕ್ಕೆ ಬೆಣೆಯನ್ನು ಒತ್ತಿದಂತಾಗುವುದು–ಎಲ್ಲಾ ತಿಳಿದಿದೆ ತಾನೆ ?"

ಬ್ಲಾಕ್ : "ಅದಿರಲಿ ! ಇಂದಿಗೂ ಅದೇ ಯಂತ್ರಗಳೇ ನಮ್ಮ ಗಣಿಗಳಲ್ಲಿ ಉಪಯೋಗದಲ್ಲಿವೆಯೆ ?"

ವಾಟ್ : "ಇಲ್ಲ, ಇಲ್ಲ ! ಸೇವರಿಯ ಯಂತ್ರವನ್ನು 'ನ್ಯೂಕೋರ್ಮ್' ಇನ್ನೂ ಉತ್ತಮಪಡಿಸಿದನು. ಅವನೊಬ್ಬ ವಿಚಿತ್ರ ಮನುಷ್ಯ. ಅವನು ತಯಾರಿಸಿದ ಯಂತ್ರವು ನಿಜವಾಗಿಯೂ ಬಹಳ ಉಪಯೋಗಕರವಾದುದು. ನೋಡಿ, ಇಲ್ಲೊಂದಿದೆ ಆ ಯಂತ್ರ."

ವಾಟ್ ತೋರಿಸಿದುದು ಒಂದು 'ನ್ಯೂಕೋರ್ಮ್' ಪಂಪು. ಮಾತನ್ನು ಮುಂದುವರಿಸಿ ವಾಟ್ : "ನೋಡಿ ! ಈ ಯಂತ್ರವನ್ನು ನೋಡಿದಾಗಿನಿಂದ ನನಗೆ ಈ ವಿಚಾರದಲ್ಲಿ ಆಸಕ್ತಿ ಬಂದಿದೆ. ಈಗಂತೂ ಸಂಶೋಧನೆಗಳಲ್ಲೇ ಮನಸ್ಸು ಲೀನವಾಗುವಂತಿದೆ ಈ ಯಂತ್ರವು ನಮ್ಮ ವಿಶ್ವವಿದ್ಯಾಲಯದ ಪ್ರೊಫೆಸರ್ ಆಂಡರ್‌ಸನ್ನರದು. ಅವರಿಂದ ಇದನ್ನು ತರಿಸಿಕೊಂಡಿದ್ದೇನೆ. ಇದು ಸ್ವಲ್ಪ ಕೆಟ್ಟುಹೋಗಿದ್ದಿತು. ಪ್ರೊಫೆಸರು ಇದನ್ನು ಸರಿಪಡಿಸುವುದಕ್ಕೆಂದು ಲಂಡನ್ನಿಗೆ ಕಳುಹಿಸಿದ್ದರು. ಆ ವಿಚಾರವು ತಿಳಿದಾಗ, 'ನಾನೇಕೆ ಸರಿಪಡಿಸ ಬಾರದು ?'—ಎನ್ನಿಸಿತು. ಡಾಕ್ಟರ್ ಆಂಡರ್‌ಸನ್ನರನ್ನು ಕಂಡು ಅದನ್ನು ವಾಪಸು ತರಿಸಬೇಕೆಂದು ಕೇಳಿದೆ. ಅವರು ವಾಪಸು ತರಿಸಿ ನನ್ನ ಬಳಿ ಕೊಟ್ಟಿದ್ದಾರೆ" ಎಂದನು.

ವಾಟ್ 'ಪಂಪ'ನ್ನು ಅವರಿಬ್ಬರ ಮುಂದೆ ಇಟ್ಟು : "ಇದು ಮೊದಲು ನೋಡಿದಾಗ ಬಹಳ ಚೆನ್ನಾಗಿತ್ತು. ಏಕೆ ಕೆಲಸಮಾಡಲಾರದು ?—ಎನ್ನಿಸಿತು. ಹಾಗೆಯೇ ಪರೀಕ್ಷಿಸಿದೆ. ಆದರೆ ಬೆಣೆಯು ಕೆಲವು ಸಲ ಮಾತ್ರ ಚಲಿಸಿ ನಿಂತು ಹೋಗುತ್ತಿತ್ತು" ಎಂದನು.

ರಾಬಿಸನ್ನನು : "ಹಬೆಯಂತ್ರವು ತೀರ ಚಿಕ್ಕದಾಗಿರುವಂತಿದೆ" ಎಂದನು. ವಾಸ್ತವವಾಗಿಯೂ ಅದು ಪುಟ್ಟದಾಗಿಯೇ ಇದ್ದಿತು.

ವಾಟ್ : "ಹಾಗೇನೂ ಇಲ್ಲ. ಬೇರೆಬೇರೆ ಭಾಗಗಳ ಪ್ರಮಾಣಗಳು ಒಂದಕ್ಕೊಂದು ಸರಿಯಾಗಿಯೇ ಇವೆ. ಆದರೂ ನೀವು ಹೇಳುವುದೂ ಸರಿ. ಇದರಲ್ಲಿ ತಕ್ಕಷ್ಟು ಹಬೆ ಉತ್ಪತ್ತಿಯಾಗುವುದಿಲ್ಲ. ಯಂತ್ರವು ಕೆಲಸ

ಮಾಡುವುದನ್ನು ತಿಳಿಸುತ್ತೇನೆ. ಇಲ್ಲಿ ನೋಡಿ: ಈ ವರ್ತುಲಸ್ತಂಭಾಕಾರದ ಕೆಳಗೆ ಈ ಬೆಣೆ ಇದೆ. ಇದು ಚಲಿಸುವಾಗ ಕೆಲಸ ಮಾಡುವ ಎರಡು ಪುಟ್ಟ ಕದಗಳಿವೆ. ಒಂದು ಕದ ತೆಗೆದು ಮೇಲಿನಿಂದ ಬರುವ ಹಬೆಯು ನುಗ್ಗಿ, ಬೆಣೆಯನ್ನು ತಳ್ಳುತ್ತದೆ. ಆಮೇಲೆ ಆ ಕದವು ಮುಚ್ಚುತ್ತದೆ. ಅನಂತರ ಇನ್ನೊಂದು ಕದವು ತೆರೆದು, ತೆರೆದು, ತಣ್ಣೀರು ನುಗ್ಗುವುದಕ್ಕೆ ಆಸ್ಪದ ಕೊಡುತ್ತದೆ. ಅದರಿಂದ ಹಬೆಯು ನೀರಾಗುತ್ತದೆ. ಆಗ ಹಬೆಯು ಆವರಿಸಿದ್ದ ಭಾಗದಲ್ಲಿ ಹೆಚ್ಚು ಭಾಗವು ನಿರ್ವಾಣವಾಗುತ್ತದೆ. ಅದರಿಂದ ಬೆಣೆಯು ಹಿಂದಕ್ಕೆ ಎಳೆಯಲ್ಪಡುತ್ತದೆ. ಅಷ್ಟೇ."

ರಾಬಿರ್ಸ: "ಈಗ ಹೇಳುವುದೇನೋ ಸುಲಭ. ಆದರೆ ನಿಜವಾಗಿ ಇದು ಪ್ರತಿಭೆಯಿಂದ ಹೊರಬಿದ್ದ ವಿಚಾರವೇ ಸರಿ. ಬೆಣೆಗೆ ಹಿಂದೊಂದು, ಮುಂದೊಂದು,—ಕದವನ್ನು ಜೋಡಿಸಿ, ಅವು ತಾವಾಗಿಯೇ ಚಲಿಸುವಂತೆಯೂ, ಅವನ್ನು ಹಿಂದಕ್ಕೂ ಮುಂದಕ್ಕೂ ತಳ್ಳುವಂತೆಯೂ ಮಾಡಿರುವುದಂತೂ ಅದ್ಭುತ ವಿಚಾರ."

ವಾಟ್: "ನಿಜ, ಆದರೆ ಅದು ನ್ಯೂಕೋಮನ ಅಭಿಪ್ರಾಯವಲ್ಲ. ಅವನು ತಯಾರಿಸಿದ್ದ ಯಂತ್ರದಲ್ಲಿ ಕದಗಳನ್ನು ಹುಡುಗರು ಸಮಯಕ್ಕೆ ಸರಿಯಾಗಿ ಮುಚ್ಚಿ ತೆರೆಯಬೇಕಾಗಿದ್ದಿತು. ಕಾರ್ನವಾಲಿನ ಗಣಿಯೊಂದರಲ್ಲಿ ಆ ಕೆಲಸಕ್ಕೆ 'ಹಂಫ್ರಿ ಪಾಟರ್' ಎಂಬೊಬ್ಬ ಪೋರನು ನೇಮಕವಾಗಿದ್ದನು. ದಿನವೆಲ್ಲಾ ಆ ಕೆಲಸವನ್ನು ಮಾಡಲು ಅವನಿಗೆ ಬೇಸರ. ಗೆಳೆಯರೊಡನೆ ಆಟವಾಡುವುದಕ್ಕೆ ಹೋಗುವುದಕ್ಕೆ ಅವನಿಗೆ ಕಾಲ ಬೇಕಾಗಿದ್ದಿತು. ಅವನು ಒಂದು ಉಪಾಯ ಹೂಡಿದ: ಅದರಿಂದ 'ಬ್ಯಾಲನ್ಸರ'ನ್ನು ಕದಗಳಿಗೆ ಕಟ್ಟಿ, ಅವನು ಕೆಲಸದಿಂದ ದೂರವಾಗಿ ಆಡಿಕೊಳ್ಳುತ್ತಿದ್ದ. ಯಂತ್ರವು ತನ್ನಷ್ಟಕ್ಕೆ ತಾನು ಚಲಿಸುತ್ತಿದ್ದಿತು. ಆ ಉಪಾಯಕ್ಕೆ ಅವನಿಗೆ ಎಷ್ಟು ಒದೆಗಳು ಬಿದ್ದುವೋ ಏನೋ! ಆದರೆ ಆ ಸೋಮಾರಿತನದ ಏರ್ಪಾಟನಿಂದ ಯಂತ್ರ ಶಾಸ್ತ್ರದ ಭಾಗಕ್ಕೆ ಒಂದು ವಿಶೇಷ ವಿಷಯವು ಸೇರಿದಂತಾಯಿತು. ಅದರಿಂದ ಹಬೆಯಂತ್ರವು ತಾನಾಗಿಯೇ ಚಲಿಸಿ ಕೆಲಸಮಾಡುವ ಸಾಧನವು ದೊರೆಯಿತು. ಕಲ್ಲಿದ್ದಲನ್ನೂ, ನೀರನ್ನೂ ಒದಗಿಸುವುದನ್ನು ಬಿಟ್ಟರೆ, ಈ ಯಂತ್ರವನ್ನು ನಡೆಯಿಸುವುದಕ್ಕೆ ಜನಗಳು ಬೇಕಿಲ್ಲದಂತಾಯಿತು. ಆ ಹುಡುಗನಿಗೆ

ಏನಾಯಿತೋ ಏನೋ ತಿಳಿಯದು. 1720ರಲ್ಲಿ ಆತನು ಹಂಗರಿ ದೇಶಕ್ಕೆ ಹೋಗಿ ಅಲ್ಲಿ ಹಬೆಯಂತ್ರಗಳನ್ನು ಸ್ಥಾಪಿಸಿದನಂತೆ."

ಬ್ಲಾಕ್ : "ಅದಿರಲಿ, ಪ್ರೊಫೆಸರ್ ಆಂಡರ್‌ಸನ್ನರ ಯಂತ್ರವನ್ನೇನು ಮಾಡಬೇಕೆಂದಿದ್ದೀರಿ ?"

ವಾಟನು ಆ ಪುಟ್ಟ ಯಂತ್ರವನ್ನೇ ದಿಟ್ಟಿಸಿನೋಡುತ್ತ ಯೋಚನಾಪರನಾಗಿ ನಿಂತನು. ಅನಂತರ : "ಪ್ರೊಫೆಸರು ತಮ್ಮ ತರಗತಿಗಳಿಗೆ ಬೇಕಾಗುವಂತೆ ಇದನ್ನು ಸರಿಪಡಿಸಬೇಕೆಂದು ಮಾತ್ರ ಹೇಳಿದ್ದಾರೆ. ಆದರೆ ಇದನ್ನು ಅಲ್ಲಿಗೇ ಬಿಟ್ಟುಬಿಡುವುದಕ್ಕೆ ಮನಸ್ಸಿಲ್ಲವಾಗಿದೆ. ನ್ಯೂಕೋರ್ಮ್ಯ ಮಾಡಿರುವುದರಲ್ಲಿ ಒಂದೆರಡು ಮೇಲ್ಪಾಟುಗಳನ್ನೇಕೆ ಮಾಡಬಾರದು—ಎಂದೆನ್ನಿಸುತ್ತಿದೆ" ಎಂದನು.

ರಾಬಿರ್ಸ್ಗ ನಕ್ಕು : "ಪೇಪಿನ್ನನಿಗಿಂತ ಸೇವರಿ ಒಂದು ಹೆಜ್ಜೆ ಮುಂದು. ಸೇವರಿಯ ಯಂತ್ರವನ್ನು ನ್ಯೂಕೋರ್ಮ್ಯ ಉತ್ತಮಗೊಳಿಸಿದ. ಈಗ ನೀವು ಇನ್ನೂ ಮುಂದುವರಿಯಬೇಕೆನ್ನುತ್ತೀರಿ. ಜನಗಳಿಗೇನೋ ಹೊಸ ಸಂಶೋಧನೆಗಳು ಇನ್ನು ಬೇಕಾಗಿಲ್ಲವೆಂದು ಕಾಣುತ್ತದೆ" ಎಂದನು.

ವಾಟ್ ತಟ್ಟನೆ ಉತ್ತರ ಕೊಟ್ಟನು : "ಅದು ಆಯಾ ಸಂದರ್ಭವನ್ನವಲಂಬಿಸಿದೆ. ದೃಷ್ಟಾಂತಕ್ಕೆ ಹೇಳುವುದಾದರೆ, ಸೇವರಿ ಅನೇಕ ಸಂಶೋಧನೆಗಳನ್ನು ಮಾಡಿದನು ; ಗಾಜನ್ನೂ, ಬೆಣಚುಕಲ್ಲನ್ನೂ ನಯ ಮಾಡುವ ಯಂತ್ರ, ಹಡಗು ನಡೆಯುವಾಗ ಅದನ್ನು ಬೇರೆ ದಿಕ್ಕಿಗೆ ತಿರುಗಿಸುವ ಚುಕ್ಕಾಣಿ ಯಂತ್ರ, ಹಡಗಿನ ತುಬಾಕಿಗಳಿಗೆ ಬೇಗ ಮದ್ದು ತುಂಬಿ ಗುಂಡು ಹಾರಿಸುವ ಯಂತ್ರ, ಮೊದಲಾದುವುಗಳು. ಕೊನೆಯ ಸಂಶೋಧನೆಯನ್ನು ಕೊಂಡುಕೊಳ್ಳಿರೆಂದು ನೌಕಾ ಶಾಖೆಯವರನ್ನು ಕೇಳಿದನು. ಆದರೆ ಅವರಿಗೆ ಕೋಪ ಬಂದಿತು. ನೌಕಾಶಾಖೆಯ ವಿಚಾರಗಳಲ್ಲಿ ಪ್ರಯೋಗ ಪರಿಶೀಲನೆ ಮಾಡಲು ಎಲ್ಲರಿಗೂ ಏನು ಅಧಿಕಾರ ?" ಎಂದು ಅವರು ಪ್ರಶ್ನಿಸಿದರು.

ರಾಬಿರ್ಸ್ಗ (ನಗುತ್ತಾ) : "ನಿಮಗಾದರೂ ಎಲ್ಲ ಅನುಕೂಲವಾಗಲಿ."

ಬ್ಲಾಕ್ : "ಬಾಯ್ಯ ! ಕ್ಲಬ್ಬಿಗೆ ಹೋಗಿ ಚಹಾ ಕುಡಿಯೋಣ. ವಾಟ್ ಚವರೇ ! ಇಗೋ ಇಷ್ಟರಲ್ಲೇ ವಾಪಸು ಬರುತ್ತೇವೆ, ನಮಸ್ಕಾರ !"

ಇಬ್ಬರೂ ಹೊರಗೆ ಹೋದಮೇಲೆ ರಾಬಿರ್ಸ್ಗ : "ಇವನು ಒಳ್ಳೆ ಜಾಣ ;

ಅಲ್ಲವೇನಯ್ಯ? ಇವನೊಬ್ಬ ಹುಚ್ಚನಂತಿರಬಹುದು ಎಂದುಕೊಂಡಿದ್ದೆ; ಆದರೆ ಒಳ್ಳೆಯ ವಿಜ್ಞಾನಿಯನ್ನೇ ನೋಡಿದಂತಾಯಿತು. ನಮ್ಮ ಪರಿಚಯ ಬೆಳೆಯುವಂತೆ ಕಾಣುತ್ತದೆ" ಎಂದನು.

ಪುನಃ ಜೇಮ್ಸ್ ವಾಟ್ ತನ್ನ ನ್ಯೂಕೋಮನ್ ಹಬೆಯಂತ್ರವನ್ನು ಮುಂದಿಟ್ಟುಕೊಂಡು ಕುಳಿತನು. ಗ್ಲಾಸ್ಗೋ ವಿಶ್ವವಿದ್ಯಾಲಯದ ಪ್ರೊಫೆಸರ ಭಾಷಣಗಳಿಗೆ ಆತನು ಯಂತ್ರವನ್ನು ಸಿದ್ಧಪಡಿಸಬೇಕಾಗಿದ್ದಿತು. ಆ ಸನ್ನಿವೇಶದಲ್ಲಿ ಆಧುನಿಕ ಹಬೆಯಂತ್ರ ಹುಟ್ಟಬೇಕೆಂದು ವಿಧಿನಿಯಮವಿದ್ದಿತೆಂದು ಕಾಣುತ್ತದೆ! ಅದುವರೆಗೆ ತಯಾರಾಗಿದ್ದಂಥ ಯಂತ್ರವು ಒರಟಾಗಿದ್ದಿತು. ಆದರೆ ಪ್ರಕೃತಿಸಿದ್ಧವಾದ ಹಬೆಯಿಂದ ನಡೆಯಿಸುವಂಥ ಈಗಿನ ಯಂತ್ರವು ಇನ್ನೂ ತಯಾರಾಗಿರಲಿಲ್ಲ. ಜೇಮ್ಸ್ ವಾಟ್ ತಯಾರಿಸಿದ ಯಂತ್ರದಿಂದ ಜನರ ದುಡಿಮೆಯೂ ಪ್ರಾಣಿಗಳನ್ನು ಉಪಯೋಗಿಸಿಕೊಳ್ಳಬೇಕಾದುದೂ ಕಡಮೆಯಾಗುವುದಕ್ಕೆ ಸಹಾಯವಾಯಿತು.

ಆ ಕೆಲಸವನ್ನು ಸಾಧಿಸುವುದಕ್ಕೆ ಕುಳಿತಿದ್ದ ಆ ಇಪ್ಪತ್ತೈದು ವಯಸ್ಸಿನ ಯುವಕನು ಅಸಾಧಾರಣ ಮನೋದಾರ್ಢ್ಯವುಳ್ಳವನಾಗಿದ್ದನು. ಅವನ ದೇಹಬಲವೇನೋ ಅಷ್ಟರಲ್ಲೇ ಇದ್ದಿತು. ಅವನು ಆರೋಗ್ಯಶಾಲಿಯಂತೂ ಆಗಿರಲೇ ಇಲ್ಲ. ಆದರೆ ತನ್ನ ಸಂಶೋಧನೆಯ ಕೆಲಸದಲ್ಲಿ ಆತನಿಗಿದ್ದ ತೀವ್ರವಾದ ಆಸಕ್ತಿಯಿಂದ ಆ ತೊಂದರೆಗಳಾವುವೂ ಅವನಿಗೆ ಅಡ್ಡಿಯಾಗಲಿಲ್ಲ. ಕ್ಲೈಡ್ ನದಿಯ ದಡದ ಗ್ರೀನಾಕ್ ಎಂಬುದು ಅವನ ಊರು. ಅಲ್ಲಿ ಒಬ್ಬ ಬಡಗಿಯ ಮನೆಯಲ್ಲಿ ಆ ಹುಡುಗನು ಹುಟ್ಟಿದನು. ಬಡಗಿಗೆ ವಾಟ್‌ಗಿಂತ ಹಿರಿಯ ಮಕ್ಕಳು ನಾಲ್ಕು ಮಂದಿ ಇದ್ದರು. ವಾಟ್ ಚಿಕ್ಕವನಾಗಿದ್ದಾಗ ಬಹಳ ಶಕ್ತಿಹೀನನಾಗಿದ್ದುದರಿಂದ ಅವನನ್ನು ಬೇರೆ ಹುಡುಗರೊಡನೆ ಆಟವಾಡಲು ತಂದೆತಾಯಿಗಳು ಬಿಡುತ್ತಿರಲಿಲ್ಲ. ಅವನನ್ನು ಪಾಠಶಾಲೆಗೂ ಕಳುಹಿಸಲಿಲ್ಲ. ಮನೆಯಲ್ಲಿ ತಾಯಿಯೇ ಅವನಿಗೆ ಅಕ್ಷರಗಳನ್ನು ಕಲಿಸಿದಳು. ಅನೇಕ ವೇಳೆ ಆ ಹುಡುಗನಿಗೆ ಏಳೆಂಟು ದಿನಗಳವರೆಗೆ ಒಂದೇ ಸಮನೆ ತಲೆನೋವು ಬಂದುಬಿಡುತ್ತಿದ್ದಿತು. ಆಗ ಆತನು ತನ್ನ ಕೋಣೆಯಿಂದ ಹೊರಗೆ ಹೋಗುತ್ತಲೇ ಇರಲಿಲ್ಲ. ಆದರೆ ಆರೋಗ್ಯವು ಸ್ವಲ್ಪ ಉತ್ತಮಗೊಂಡ ಕೂಡಲೆ ಆ ಹುಡುಗನು ತಂದೆಯ ಅಂಗಡಿಗೆ ಹೋಗಿ,

ತಾನಾಗಿಯೇ ಕೆಲಸ ಮಾಡುವುದಕ್ಕೆ ಪ್ರಾರಂಭಿಸುತ್ತಿದ್ದನು. ಸ್ವಲ್ಪ ಕಾಲ ದಲ್ಲೇ ಸ್ವಂತವಾಗಿ ಕೆಲಸಗಳನ್ನು ಮಾಡಿಕೊಟ್ಟು ಸಂಪಾದನೆ ಮಾಡುವುದಕ್ಕೆ ತೊಡಗಿದನು. ಹಡಗಿಗೆ ಉಪಯೋಗಿಸತಕ್ಕ ಯಂತ್ರೋಪಕರಣಗಳನ್ನು ಸರಿಮಾಡುವುದರಲ್ಲಿ ಅವನು ಹೆಚ್ಚಾಗಿ ಆಸಕ್ತಿ ವಹಿಸುತ್ತಿದ್ದನು. ಅಲ್ಲದೆ ಕೈಗೆ ಯಾವ ಪುಸ್ತಕ ಸಿಕ್ಕಿದರೂ ವಾಟ್ ಅದನ್ನು ಶ್ರದ್ಧೆಯಿಂದ ಆಮೂಲಾಗ್ರ ವಾಗಿ ಓದುತ್ತಿದ್ದನು. ಮುಖ್ಯವಾಗಿ ಪ್ರಕೃತಿ ವಿಜ್ಞಾನದ ಪುಸ್ತಕಗಳ ಮೇಲೆ ಅವನಿಗೆ ಬಹಳ ಮಮತೆ.

ಹದಿನೈದು ವರ್ಷ ವಯಸ್ಸಾಗುವ ವೇಳೆಗೆ ವಾಟನು ಸ್ವಲ್ಪಕಾಲ ಗ್ಲಾಸ್ಗೋ ಪಟ್ಟಣದಲ್ಲಿ ಪ್ರೊಫೆಸರ್ ಡಿಕ್ ಎಂಬುವರ ಬಳಿ ಶಿಕ್ಷಣ ಪಡೆದನು. ಅನಂತರ ಸ್ವಲ್ಪಕಾಲ ಲಂಡನ್ನಿನಲ್ಲಿದ್ದನು. ಆಮೇಲೆ ಆತನು ಪುನಃ ಗ್ಲಾಸ್ಗೋ ವಿಗೇ ಹಿಂದಿರುಗಿ ಪ್ರೊಫೆಸರ್ ಡಿಕ್‌ರವರ ಆಶ್ರಿತನಾಗಿದ್ದು ತನ್ನ ಸಂಶೋಧನೆ ಗಳನ್ನು ಮುಂದುವರಿಸಿದನು.

ಒಂದು ದಿನ ವಾಟ್ ತನ್ನ ನ್ಯೂಕೋಮನ್ ಯಂತ್ರವನ್ನು ಮುಂದಿಟ್ಟು ಕೊಂಡು ಕುಳಿತಿದ್ದನು. ಮನಸ್ಸೆಲ್ಲಾ ಅದರ ಮೇಲಿದ್ದಿತು. 'ಇದು ಉಂಟು ಮಾಡುವ ಹಬೆಯು ಬಹು ಸ್ವಲ್ಪ; ಅಷ್ಟು ಸ್ವಲ್ಪ ಹಬೆ ಉತ್ಪತ್ತಿಯಾಗುವುದಕ್ಕೆ ವೆಚ್ಚವಾಗುವ ಕಲ್ಲಿದ್ದಲೋ ಬಹಳ ಹೆಚ್ಚು. ಹೀಗಿರುತ್ತ, ಈ ಯಂತ್ರವು ಜನರಿಗೆ ಸಹಾಯಕವಾಗುವುದು ಹೇಗೆ?' ಹೀಗೆಲ್ಲಾ ವಾಟ್ ಗುಣಾಕಾರ ಹಾಕುತ್ತಿದ್ದನು; 'ಉತ್ಪತ್ತಿಮಾಡುವ ಹಬೆಯಿಂದ ಯಂತ್ರದಲ್ಲಿ ಆದಷ್ಟು ಹೆಚ್ಚು ಕೆಲಸ ನಡೆಯುವಂತೆ ಮಾಡಿದರೆ?' ಇತ್ಯಾದಿ ಪ್ರಶ್ನೆಗಳು ಮನಸ್ಸಿನಲ್ಲಿ ಚಿಮ್ಮುತ್ತಿದ್ದವು.

ಆ ಕೊನೆಯ ಪ್ರಶ್ನೆಯು ಬಹು ಮುಖ್ಯವಾದುದೆಂದು ತೋರಿತು. 'ಸರಿ, ಆದಷ್ಟು ಹೆಚ್ಚು ಕೆಲಸ ನಡೆಯುವಂತೆ ಮಾಡುವುದು ಹೇಗೆ?'– ಅದು ಮುಂದಿನ ಪ್ರಶ್ನೆ.

ಯಂತ್ರದ ಬೆಣೆಯ ಮೇಲೆ ತಣ್ಣೀರನ್ನು ಚಿಮುಕಿಸಿ ಹಬೆಯು ನೀರಾಗು ವಂತೆ ಮಾಡುವುದು ನ್ಯೂಕೋಮನ್ನನ ಯಂತ್ರದಲ್ಲಿದ್ದ ಏರ್ಪಾಟು. ಅದೇನೂ ಅಷ್ಟು ಉತ್ಕೃಷ್ಟವಾದ ಏರ್ಪಾಟಾಗಿರಲಿಲ್ಲ. ಬೇರೆ ಒಳ್ಳೆಯ ವಿಧಾನವನ್ನು ಕಂಡುಹಿಡಿಯಬೇಕೆನ್ನಿಸಿತು.

ಆ ವಿಧಾನವು ತನಗೆ ಅಕಸ್ಮಾತ್ತಾಗಿ ಹೊಳೆದುದನ್ನು ವಾಟ್ ಈ ರೀತಿ ತಿಳಿಸಿದ್ದಾನೆ:—"1765ನೆಯ ಇಸವಿಯಲ್ಲಿ ಒಂದು ಭಾನುವಾರದ ದಿನ ಮಧ್ಯಾಹ್ನ, ಗ್ಲಾಸ್ಗೋ ಪಟ್ಟಣದ ಬಯಲಿನಲ್ಲಿ ತಿರುಗಾಡುವುದಕ್ಕೆಂದು ಹೋಗಿದ್ದೆ; ಸ್ವಲ್ಪದೂರ ಹೋದ ಮೇಲೆ ಯಂತ್ರದ ವಿಚಾರದಲ್ಲಿ ನಡೆಯಿಸುತ್ತಿದ್ದ ಪ್ರಯೋಗಗಳು ಜ್ಞಾಪಕಕ್ಕೆ ಬಂದವು. ವರ್ತಲಸ್ತಂಭಾಕೃತಿಯ ಭಾಗದಲ್ಲಿ ಉಷ್ಣವನ್ನು ಆದಷ್ಟು ಉಳಿಸಬೇಕೆಂಬುದೇ ಆಗಿನ ಪ್ರಶ್ನೆಯಾಗಿದ್ದಿತು. ಉಷ್ಣವಾದ ಹಬೆಯು ವಿಕಾಸವಾಗಿ ಹರಡಬಲ್ಲುದಾದ್ದರಿಂದ, ಅದು ಹೆಚ್ಚು ಸ್ಥಳವನ್ನು ಆಕ್ರಮಿಸುತ್ತದೆಂದೂ, ಆದುದರಿಂದ ಮೊದಲೇ ಖಾಲಿಯಾದ ಸ್ಥಳವು ಮುಂದಿದ್ದರೆ ಅಲ್ಲಿಗೆ ಅದು ನುಗ್ಗುವುದು ಸಹಜವೆಂದೂ ತೋರಿತು. ಆದುದರಿಂದ ಯಂತ್ರಕ್ಕೆ ಇನ್ನೊಂದು ಭಾಗವನ್ನು ಸೇರಿಸಿ ಅದರಲ್ಲಿ ಏನೂ ಇಲ್ಲದಂತೆ ಮಾಡಿದರೆ, ಹಬೆಯು ಆ ಭಾಗಕ್ಕೆ ನುಗ್ಗುವಂತೆ ಮಾಡಬಹುದಾಗಿದ್ದಿತು. ಹಬೆಯು ಇರುವ ಭಾಗಕ್ಕೂ ಹಬೆಯು ನುಗ್ಗುವಂತೆ ಮಾಡಬೇಕಾದ ಭಾಗಕ್ಕೂ ಮಧ್ಯೆ ದಾರಿ ಮಾಡಬೇಕೆನ್ನಿಸಿತು."

ಆದರೆ ವಾಟ್ ಉತ್ತಮಪಡಿಸಿದ ಆ ಯಂತ್ರವನ್ನು ಇನ್ನೂ ಸಾಮಾನ್ಯ ಬಳಕೆಗೆ ತರುವುದು ಸಾಧ್ಯವಾಗಿರಲಿಲ್ಲ. ಅಂಥ ಒಂದು ದೊಡ್ಡ ಯಂತ್ರವನ್ನು ತಯಾರಿಸಿ ಅದನ್ನು ಜನಗಳಿಗೆ ಪ್ರದರ್ಶಿಸುವುದಕ್ಕೆ ಬಹಳ ಹಣ ಬೇಕಾಗಿದ್ದಿತು. 'ಕ್ಯಾರ್ರ ಕಬ್ಬಿಣದ ಕಾರ್ಖಾನೆ'ಯ ಮಾಲೀಕರಾದ ಡಾಕ್ಟರ್ ರೋಬಕ್ ಎಂಬುವರು ವಾಟ್‌ನೊಡನೆ ಒಪ್ಪಂದಕ್ಕೆ ಬಂದರು. ಆ ಹೊಸ ಯಂತ್ರವನ್ನು ಅವರ ಕಾರ್ಖಾನೆಯಲ್ಲಿ ತಯಾರಿಸಿ ಪ್ರದರ್ಶಿಸುವುದು, ಬರುವ ಲಾಭದಲ್ಲಿ ರೋಬಕರಿಗೆ ಎರಡು ಪಾಲು, ಮತ್ತು ವಾಟನಿಗೆ ಒಂದು ಪಾಲು—ಇದೇ ಆ ಒಪ್ಪಂದ. ದೊಡ್ಡದಾದ ಯಂತ್ರವನ್ನು ತಯಾರಿಸುವುದೇ ವಾಟನಿಗಿದ್ದ ಮೊದಲನೆಯ ಕೆಲಸ. ಆದುದರಿಂದ ಒಪ್ಪಂದಕ್ಕೆ ರುಜು ಹಾಕಿ, ಆ ಯಂತ್ರವನ್ನು ವಾಟ್ ನಿರ್ಮಿಸಿಯೇ ಬಿಟ್ಟನು. ಯಂತ್ರವು ಊಹಿಸಿದುದಕ್ಕಿಂತಲೂ ಅಮೋಘವಾಗಿಯೇ ಇದ್ದಿತು. ಆದರೂ ವಸ್ತುತಃ ಅದರಿಂದ ಇನ್ನೂ ಯಾವ ಸಾಧನೆಯೂ ಆಗಿರಲಿಲ್ಲ. ಪ್ರದರ್ಶನದಿಂದ ಹೆಚ್ಚು ಹಣವೂ ಬರಲಿಲ್ಲ. ಡಾಕ್ಟರ್ ರೋಬಕರಿಗೆ ಹಣವನ್ನು ಮುಂಗಡವಾಗಿ ಕೊಟ್ಟಿದ್ದವರಿಂದ ತಗಾದೆ ಪ್ರಾರಂಭವಾಯಿತು. ವಾಟ್‌ನಿಗೆ ಸಂಶೋಧನೆಗಳನ್ನು

ಮುಂದುವರಿಸುವ ತವಕ; ಡಾಕ್ಟರ್ ರೋಬಕ್‌ರಿಗೆ ಸಾಲದ ಹಣವನ್ನು ಸಂಪಾದಿಸುವುದು ಹೇಗೆಂಬ ಯೋಚನೆ. ಹೀಗಾಗಿ ಮುಂದೆ ಅವರಿಬ್ಬರೂ ಒಟ್ಟಿಗೆ ಕೆಲಸ ಮಾಡುವುದು ಸಾಧ್ಯವಿಲ್ಲದೆ ಹೋಯಿತು. ಕೆಲವು ವರ್ಷಗಳ ಅನಂತರ ಇಬ್ಬರೂ ತಮ್ಮ ತಮ್ಮ ದಾರಿ ಹಿಡಿದರು.

ಪುನಃ ವಾಟನಿಗೆ ಮುಂದೇನು ದಾರಿ ಮಾಡಿಕೊಳ್ಳಬೇಕೆಂಬ ಪ್ರಶ್ನೆ ಬಂದಿತು. ತನ್ನ ಅಂಗಡಿಯಿಂದ ಬಂದ ಸಂಪಾದನೆಯನ್ನೆಲ್ಲಾ ಕೊಟ್ಟು, ಇನ್ನೂ ಸ್ವಲ್ಪ ಹಣವನ್ನು ಕೊಟ್ಟಮೇಲೆ, ಅವನು ತನ್ನ ಯಂತ್ರದ ಮೇಲಿನ ಸ್ವಾಮ್ಯದ ಹಕ್ಕಿಗೆ ರುಸುಮನ್ನು ಕೊಟ್ಟಂತಾಯಿತು. ಆದಾಯ ಹೆಚ್ಚಿಸಿ ಕೊಳ್ಳಲು ಬೇರೆ ಯಾವುದಾದರೂ ಕೆಲಸವನ್ನು ಮಾಡಬೇಕಾಯಿತು. ಅದ ಕ್ಕಾಗಿ ಆಗ ಕಾಮಗಾರಿ ನಡೆಯುತ್ತಿದ್ದ ಒಂದು ನಾಲೆಯ 'ಸರ್ವೆ' ಕೆಲಸ ವನ್ನು ಕೈಕೊಂಡನು. ಅಂತು, ಯಂತ್ರಕ್ಕೆ ಸಂಬಂಧಿಸಿದ ಸಂಶೋಧನೆಯ ಕೆಲಸಗಳನ್ನು ಮುಂದಕ್ಕೆ ತಳ್ಳಬೇಕಾಯಿತು.

ಆದರೆ, ಅದೃಷ್ಟವಶಾತ್ ಬರ್ಮಿಂಗ್ಹ್ಯಾಂನ ಒಬ್ಬ ಯಂತ್ರ ತಯಾರಿಕೆ ಗಾರನು ವಾಟನ ಸಂಶೋಧನೆಯ ವಿಚಾರವನ್ನು ಕೇಳಿ ಅದರಲ್ಲಿ ಆಸಕ್ತಿ ಹೊಂದಿದ್ದನು. ಮಥ್ಯಾಸ್ ಬೌಲ್ಟನ್—ಅವನ ಹೆಸರು. ಆತ ಸ್ವತಃ ಇಂಜಿನಿಯರು. ಅವನಲ್ಲಿ ಹಣವೂ, ಕಾರ್ಯಶ್ರದ್ಧೆಯೂ ಇದ್ದುವು. ಬರ್ಮಿಂಗ್ಹ್ಯಾಮ್‌ಗೆ ಉತ್ತರಕ್ಕೆ ಉಲ್ವರ್‌ಹ್ಯಾಂಪ್ಟನ್ನಿಗೆ ಹೋಗುವ ದಾರಿ ಯಲ್ಲಿ, ಸೋಹೋದಲ್ಲಿದ್ದ ಅವನ ಶಿಲ್ಪ ಕಾಮುಗಾರಿಗಳು ಆ ಕಾಲದಲ್ಲಿ ಇಂಗ್ಲೆಂಡಿನಲ್ಲೇ ಅತ್ಯಂತ ನೂತನವಾಗಿದ್ದುವು. ಹಬೆಯಂತ್ರವನ್ನು ಜನರ ಗಮನಕ್ಕೆ ತರುವುದಕ್ಕೆ ಆತನು ಸರಿಯಾದವನಾಗಿದ್ದುದು ಮಾತ್ರವಲ್ಲ; ಇನ್ನೂ ಜನರಲ್ಲಿ ವ್ಯವಹಾರ ಬೆಳೆಸಲು ದಾರ್ಷ್ಟ್ಯಪಡೆದಿಲ್ಲದಿದ್ದ ವಾಟ್‌ನಿಗೆ ಆ ಅನುಭವಶಾಲಿಯು ಸರಿಯಾದ ಜೊತೆಗಾರನೂ ಆಗಿದ್ದನು. ಆಗ್ಗೆ ಕೆಲವು ವರ್ಷಗಳ ಹಿಂದೆಯೇ, ಬೌಲ್ಟನ್ನನು, ಬೆಂಜಮಿನ್ ಫ್ರಾಂಕ್‌ಲಿನ್ನ ನೊಡನೆ 'ಅಗ್ನಿನಿವಾರಕ ಇಂಜಿನಿ'ನ ವಿಚಾರವಾಗಿ ಪತ್ರವ್ಯವಹಾರ ನಡೆಯಿಸಿ ದವನಾಗಿದ್ದನು. ಈಗ ಆತನು ವಾಟನೊಡನೆ ಕೆಲಸ ನಡೆಯಿಸುವೆನೆಂದು ಹೇಳಿ ಉದಾರವಾದ, ಗೌರವಯುತವಾದ ಕರಾರುಗಳನ್ನು ಸೂಚಿಸಿ ಬರೆದನು.

ಆಮೇಲೆ, ಒಂದು ದಿನ ಸ್ವತಃ ಬೌಲ್ಟನ್ನನೇ ವಾಟ್‌ನನ್ನು

ನೋಡಲು ಬಂದನು. ಭಾರಿ ಆಳಾದ ಬೌಲ್ಟನ್ ವಾಟನ ಅಂಗಡಿಯಲ್ಲಿ ನಿಂತಾಗ ಅಂಗಡಿಯೇ ತುಂಬಿದಂತಿದ್ದಿತು. ಆತನು: "ವಾಟ್, ಈ ಅಂಗಡಿಯನ್ನು ಮುಚ್ಚಿ ಬಂದುಬಿಡು; ಸೋಹೋದಲ್ಲಿ ನಮ್ಮ ಬೇರೊಂದು ಅಂಗಡಿಯನ್ನು ತೆರೆಯೋಣ. ಹಬೆಯಂತ್ರವನ್ನು ದೊಡ್ಡದಾಗಿ ಕಟ್ಟೋಣ; ಇದಕ್ಕಾಗಿ 40 ಸಾವಿರ ಪೌಂಡುಗಳನ್ನು ವ್ಯಯಮಾಡುವುದಕ್ಕೆ ಸಿದ್ಧವಾಗಿದ್ದೇನೆ" ಎಂದನು.

ಸ್ವಲ್ಪ ಕಾಲದದೊಳಗೇ ಬೌಲ್ಟನ್ ಅಂಡ್ ವಾಟ್ ಕಂಪನಿಯವರ ಕಾಮಗಾರಿಗಳು ಆಗಿನ ಪ್ರಪಂಚದಲ್ಲೇ ಅತ್ಯಾಶ್ಚರ್ಯಕರವಾದುವು. ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಮತ್ತು ಅಮೇರಿಕಾದಿಂದ ಸಹ ಇಂಜಿನಿಯರುಗಳು ಅಲ್ಲಿದ್ದ ಯಂತ್ರಗಳನ್ನು ನೋಡುವುದಕ್ಕೆ ಬಂದರು. ಭಾಷಣಗಳ ಸಭಾಂಗಣಗಳಲ್ಲೂ, ಗಣಿ ಕಾಮಗಾರಿಗಳಿದ್ದ ಕಡೆಗಳಲ್ಲೂ, ಪ್ರಯೋಗ ಪರಿಶೀಲನಾಲಯಗಳಲ್ಲೂ, 'ವರ್ಕ್‌ಷಾಪು'ಗಳಲ್ಲೂ ಆ ಕಾಮಗಾರಿಗಳ ವಿಚಾರವಾಗಿ ಮನಸ್ಸಿಗೆ ಬಂದ ಅಭಿಪ್ರಾಯಗಳನ್ನು ಜನರು ಹೇಳಲಾರಂಭಿಸಿದರು. ಅಲ್ಲಿನ ಯಂತ್ರಗಳಿಂದ ಬಹು ಸ್ವಲ್ಪ ವೆಚ್ಚದಲ್ಲಿ ಹೊಸ ಯಂತ್ರೋಪಕರಣಗಳನ್ನು ತಯಾರಿಸಬಹುದೆಂದೂ, ಅವುಗಳಿಂದ ಯಾವ ಪ್ರಾಣಿಯೇ ಆಗಲಿ ಮಾಡುವುದಕ್ಕೆ ಸಾಧ್ಯವಿಲ್ಲದಂಥ ಕೆಲಸಗಳನ್ನು ಸಾಧಿಸಬಹುದೆಂದೂ ವದಂತಿ ಹುಟ್ಟಿತು.

ಹಬೆಯಂತ್ರವನ್ನು ಮೊಟ್ಟಮೊದಲು ಗಣಿಗಳಿಂದ ನೀರನ್ನು ತೆಗೆದು ಹಾಕುವುದಕ್ಕೆ ಉಪಯೋಗಿಸುತ್ತಿದ್ದರು. ಆದರೆ ಅದರಿಂದ ಇನ್ನೂ ಅನೇಕ ಉಪಯೋಗಗಳಾಗುವುದು ಸಾಧ್ಯವೆಂದು ಬೌಲ್ಟನ್ ಮೊದಲೇ ಊಹಿಸಿದ್ದನು. ಯಾವ ಕೆಲಸಕ್ಕೆ ಬೇಕೆಂದರೆ ಅದಕ್ಕೆ ಶಕ್ತಿಯನ್ನು ಒದಗಿಸತಕ್ಕ ಒಂದು ಯಂತ್ರದ ಇಂಜಿನನ್ನು ತಯಾರಿಸಬೇಕೆಂದು ಆತನಿಗೆ ಹಂಬಲವಿದ್ದಿತು. ಆದರೆ ಅದು ಸಾಧ್ಯವಾಗಬೇಕಾದರೆ, ಹಬೆಯಂತ್ರದಲ್ಲಿ ಬೆಣೆಯು ಮೇಲಕ್ಕೂ ಕೆಳಕ್ಕೂ ಚಲಿಸುವುದಕ್ಕೆ ಬದಲಾಗಿ, ಆ ಚಲನೆಯು ವೃತ್ತಾಕಾರವಾಗಿರುವಂತೆ ಮೊದಲು ಏರ್ಪಡಿಸಬೇಕಾಗಿದ್ದಿತು. ಆ ಕೆಲಸವನ್ನು ಸಾಧಿಸಲು ವಾಟ್ ಪ್ರಯೋಗಗಳನ್ನು ಪ್ರಾರಂಭಿಸಿದನು. 1781 ರಲ್ಲಿ ಆತನು ಆ ಸಂಬಂಧವಲ್ಲಿ ಐದು ಬಗೆಯ ಯಂತ್ರಗಳನ್ನು ತನ್ನ ಹೆಸರಿಗೆ 'ಪೇಟೆಂಟ್'

ಮಾಡಿಸಿದನು. ಸೂರ್ಯ ಮತ್ತು ಗ್ರಹಗಳ ಸಂಚಾರವನ್ನು ಹೋಲುತ್ತಿದ್ದಂಥ ಚಕ್ರವೇ ಅದರಲ್ಲೆಲ್ಲಾ ಅತ್ಯುತ್ತಮವಾದುದು ಮತ್ತು ಬಹಳ ಪ್ರಸಿದ್ಧವಾದುದು. ಆ ರೀತಿ ಹಬೆಯಂತ್ರವು ಒಂದು ಚಕ್ರವನ್ನು ತಳ್ಳುವಂತಾದ ಮೇಲೆ ಆ ಚಕ್ರವನ್ನು ಬೇರೆ ಯಾವ ಯಂತ್ರಕ್ಕಾಗಲಿ ಜೋಡಿಸಿಕೊಳ್ಳುವುದು ಸುಲಭವಾಯಿತು. ಅನಂತರ ಒಂದು ವರ್ಷದ ಮೇಲೆ, ಒಂದು ಭಾರಿ ಸುತ್ತಿಗೆಯನ್ನು ಹಬೆಯಂತ್ರದ ಶಕ್ತಿಯಿಂದ ಕುಲುಮೆಯಲ್ಲಿ ಕೆಲಸಕ್ಕೆ ಉಪಯೋಗಿಸುವುದು ಸಾಧ್ಯವಾಯಿತು. ಇನ್ನೊಂದು ವರ್ಷದೊಳಗೆ, ಗಣಿಗಳಿಂದ ತೆಗೆದ ಕಲ್ಲಿದ್ದಲನ್ನು ತುಂಬಿದ ಕಡಾಯಿಗಳನ್ನು ಮೇಲಕ್ಕೆತ್ತುವುದಕ್ಕೂ ಹಬೆಯಂತ್ರವನ್ನು ಬಳಸಲಾಯಿತು. ಇನ್ನೂ ಕೆಲವು ದಿನಗಳಲ್ಲಿ, ಎಣ್ಣೆಯ ಗಾಣವನ್ನು ತಿರುಗಿಸುವುದಕ್ಕೂ ಹಬೆಯಂತ್ರವನ್ನು ಬಳಕೆಗೆ ತಂದರು.

ಬೌಲ್ಟನ್ ಅಂಡ್ ವಾಟ್ ಕಂಪನಿಯವರಿಗೆ ಒಳ್ಳೆಯ ಸಂಪಾದನೆ ದೊರೆಯುವುದಕ್ಕೆ ಪ್ರಾರಂಭವಾಯಿತು. ಅಲ್ಲಿಂದ ಮುಂದೆ ತನ್ನ ಆಗಿಂದಾಗಿನ ಆವಶ್ಯಕತೆಗಳಿಗಾಗಿ ದುಡಿಯಬೇಕಾಗಿಲ್ಲದ ವಿಚಿತ್ರ ಅನುಭವವು ವಾಟನಿಗೆ ಸಾಮಾನ್ಯವಾಗಿ, ಅವನ ಮನಸ್ಸು ಅದರಲ್ಲಿ ಪಳಗಿತು. ಆದರೆ ಚಿಕ್ಕವಯಸ್ಸಿನಿಂದಲೂ ಬಹಳವಾಗಿ ದುಡಿದಿದ್ದುದರಿಂದ ಆ ಅತಿಯಾದ ದುಡಿಮೆಯ ಫಲಿತಾಂಶಗಳು ಆಗ ಕಾಣಿಸಿಕೊಂಡವು. ಅವನು ಖಾಯಿಲೆಯಿಂದ ಬಹುಕಾಲ ಹಾಸಿಗೆ ಬಿಟ್ಟು ಏಳದಾದನು. ಈ ಮಧ್ಯೆ ಅವನು ಕಂಡು ಹಿಡಿದುದನ್ನು ತಾವೇ ಕಂಡು ಹಿಡಿದ ವಿಷಯಗಳೆಂದು ಹೇಳುವ ಶತ್ರುಗಳೂ ಹುಟ್ಟಿಕೊಂಡರು. ಅವನಿಗೊದಗಿದ್ದ ಜಯವನ್ನು ಉಪಾಯವಾಗಿ ಕಸಿದುಕೊಂಡು, ಸುಲಭವಾಗಿ ಹೇರಳವಾದ ಧನವನ್ನು ಸಂಗ್ರಹಿಸಿಬಿಡಬೇಕೆಂಬುದೇ ಆ ಶತ್ರುಗಳ ಹಂಚಿಕೆಯಾಗಿದ್ದಿತು. ಅವನು 'ಪೇಟೆಂಟ್' ಹಕ್ಕನ್ನು ಪಡೆದುಕೊಂಡಿದ್ದ ಯಂತ್ರಗಳನ್ನು ಅವರು ಅವನ ಅನುಮತಿಯಿಲ್ಲದೆ ತಯಾರಿಸತೊಡಗಿದರು. ವಾಟನಿಗೇನೋ ಜನಗಳಲ್ಲಿ ಧಾರಾಳವಾಗಿ ಬೆರೆಯುವುದಕ್ಕೆ ಸಂಕೋಚ. ಆದರೂ ನಿರ್ವಾಹವಿಲ್ಲದೆ, ತನ್ನ ಹಕ್ಕನ್ನು ಕಾಪಾಡಿಕೊಳ್ಳುವುದಕ್ಕಾಗಿ, ಪಾರ್ಲಿಮೆಂಟಿನ ಮುಂದೆ ಹಾಜರಾಗುವುದಕ್ಕೆ ಆತನು ಲಂಡನ್ನಿಗೆ ಹೊರಟನು. ಮೊಕದ್ದಮೆಯಲ್ಲೇನೋ ವಾಟನಿಗೆ ಸುಲಭವಾಗಿಯೇ ಜಯ ದೊರೆಯಿತು. ಅಂತು ಹಬೆಯಂತ್ರವನ್ನು ಕಂಡುಹಿಡಿದು ಮಾನವ

ಕೋಟಿಗೆ ಉಪಕಾರ ಮಾಡಿದವನು ವಾಟನೇ ಹೊರತು ಬೇರೆ ಯಾರೂ ಅಲ್ಲವೆಂದು ಸ್ವಲ್ಪ ಕಾಲದಲ್ಲೇ ಶಿಲ್ಪಶಾಸ್ತ್ರದಲ್ಲಿ ಆಸಕ್ತಿ ಇದ್ದವರಿಗೆಲ್ಲಾ ಸ್ಪಷ್ಟವಾಯಿತು.

ಒಂದು ದಿನ ಮೆಸರ್ಸ್ ಬೌಲ್ಟನ್ ಅಂಡ್ ಕಂಪನಿಗೆ ಒಬ್ಬ ಹೊಸ ಬನು ಬಂದನು. ಅವನು ಎತ್ತರವಾಗಿ, ಸ್ಫುರದ್ರೂಪಿಯಾಗಿದ್ದ ಮನುಷ್ಯ. ಅವನ ಹುಬ್ಬುಗಳು ದಪ್ಪವಾಗಿ, ತಲೆತುಂಬಾ ಕಪ್ಪು ಕೂದಲಿದ್ದು, ಆ ಮನುಷ್ಯನು ಸಂದರನಾಗಿದ್ದುದಲ್ಲದೆ, ಅವನ ಸ್ವಭಾವವೂ ಬಹಳ ನಮ್ರವಾಗಿ ಆಕರ್ಷ ಣೀಯುವಾಗಿದ್ದಿತು. ಅವನು ತಾನು ಚಿತ್ರಕಾರ ಮತ್ತು ಇಂಜಿನಿಯರೆಂದೂ, ತನ್ನ ಹೆಸರು ರಾಬರ್ಟ್ ಫುಲ್ಟನ್ ಎಂದೂ ತಿಳಿಸಿದನು. ಅಲ್ಲದೆ, ಅವನು ತನ್ನ ಕಸಬಿನಲ್ಲಿ ತನಗೆ ಜೇಮ್ಸ್ ವಾಟನ ಆದರ್ಶದಿಂದ ಬಹಳ ಹುರು ಪುಂಟಾಗುತ್ತಿದ್ದಿತೆಂದೂ ; ವಾಟನನ್ನು ಕಾಣದಿದ್ದುದಕ್ಕೆ ತನಗೆ ಆಶಾಭಂಗ ವಾಗಿದ್ದುದಾಗಿಯೂ ; ತಾನು ಆಗ ಒಂದು ಸಂಶೋಧನೆ ನಡೆಸುತ್ತಿದ್ದು ದಾಗಿಯೂ ;—ಅದೇನೆಂದರೆ ;— ಹಡಗಿನಲ್ಲಿ ಒಂದು ಹಬೆ ಯಂತ್ರವನ್ನು ಜೋಡಿಸಿ ಅದರ ಸಹಾಯದಿಂದ ಹಡಗು ನಡೆಯುುವಂತೆ ತಾನು ಮಾಡ ಬೇಕೆಂದಿದ್ದುದಾಗಿಯೂ—ಆ ವಿಚಾರವಾಗಿಯೇ ತಾನು ಬಂದಿದ್ದುದಾಗಿಯೂ, ತಿಳಿಸಿದನು.

ಫುಲ್ಟನ್ ತನ್ನ ವಿಚಾರವಾಗಿ ಇನ್ನೂ ಕೆಲವು ವಿಷಯಗಳನ್ನು ಹೇಳಿ ದನು. ಅನೇಕ ಘಟನೆಗಳು ನಡೆದು, ಅನುಭವಗಳಾದ ಮೇಲೆಯೇ ತನಗೆ ಆ ಸಂಶೋಧನೆಯ ವಿಚಾರದಲ್ಲಿ ಆಸಕ್ತಿ ಹುಟ್ಟಿತೆಂದು ಫುಲ್ಟನ್ ಹೇಳಿದನು. ಆತನ ಊರು ಪೆನ್‌ಸಿಲ್ವೇನಿಯಾ ಪ್ರಾಂತದ ಲಂಕಾಸ್ಟರ್ ನಗರ. ಅಲ್ಲಿದ್ದಾಗ ಚಿಕ್ಕವಯಸ್ಸಿನಲ್ಲಿ ಆತನು ಪಾದರಸವನ್ನುಪಯೋಗಿಸಿಕೊಂಡು ಪ್ರಯೋಗ ಗಳನ್ನು ನಡೆಸುತ್ತಿದ್ದನಂತೆ. ಅದರಿಂದ ಜನರು ಅವನನ್ನು "ಪಾದರಸದ ಬಾಬ್" ಎಂದೇ ಕರೆಯುುತ್ತಿದ್ದರಂತೆ. ಆತನ ತಂದೆಯು ಅಮೇರಿಕಾದ ಸ್ವಾತಂತ್ರ್ಯಯುದ್ಧದಲ್ಲಿ ಚಿಕ್ಕವಯಸ್ಸಿನಲ್ಲೇ ಮೃತನಾದನು. ಎಳೆಯ ವಯಸ್ಸಿ ನಲ್ಲೇ ಫುಲ್ಟನಿಗೆ ತನ್ನ ಮತ್ತು ತನ್ನ ತಾಯಿಯ ಪೋಷಣೆಯ ಜವಾಬ್ದಾರಿಯು ತಲೆಯಮೇಲೆ ಬಿದ್ದಿತು. ಆತನಿಗೆ ನಕಾಸೆ ಬಿಡಿಸುವುದರಲ್ಲೂ ಚಿತ್ರ ಬರೆಯುುವುದರಲ್ಲೂ ಪರಿಶ್ರಮವಿದ್ದುದರಿಂದ ಫಿಲಡೆಲ್ಫಿಯದಲ್ಲಿ ಕೆಲಸ

ದೊರೆಯಿತು. ಅಲ್ಲಿ ಬೆಂಜಮಿನ್ ಫ್ರಾಂಕ್‌ಲಿನ್ನನ ಪರಿಚಯವೂ ಆಯಿತು. ಆ ಪರಿಚಯದಿಂದ ಶಿಲ್ಪಶಾಸ್ತ್ರದಲ್ಲಿ ಫುಲ್ಟನನಿಗಿದ್ದ ಅಭಿರುಚಿ ಮೊಳೆಯಿತು. ಆದರೆ ಇಂಗ್ಲೆಂಡಿಗೆ ಹೋಗಿ ಕಲೆಯ ವಿಚಾರದಲ್ಲಿ ವ್ಯಾಸಂಗ ಮಾಡಬೇಕೆಂಬುದು ಫುಲ್ಟನನಿಗಿದ್ದ ಹಿರಿಯಾಸೆ. ಆ ವೇಳೆಗಾಗಲೇ ಆತನು ತನ್ನ ತಾಯಿಗೆ ಒಂದು ಮನೆಯನ್ನು ತೆಗೆದುಕೊಟ್ಟಿದ್ದನು. ಅಲ್ಲದೆ ತಾನು ವ್ಯಾಸಂಗಕ್ಕಾಗಿ ಯೂರೋಪಿಗೆ ಪ್ರಯಾಣ ಬೆಳೆಸಬೇಕೆಂದು ಆತನು ಯೋಚಿಸುತ್ತಿದ್ದನು. ಇಪ್ಪತ್ತೊಂದನೆಯ ವಯಸ್ಸಿನ ವೇಳೆಗೆ ಫುಲ್ಟನ್ ಅಷ್ಟು ಯಶಸ್ವಿಯಾಗಿ ದುಡಿದಿದ್ದನು.

ಆದರೇನಂತೆ? ಆತನು ಇನ್ನೇನು ಹೊರಡಬೇಕೆಂದು ಪ್ರಯಾಣ ಮಾಡುತ್ತಿದ್ದಾಗ, ತಾನು, ಕೊಲಂಬಸ್ ಎಷ್ಟು ಜಾಗ್ರತೆ ಪ್ರಯಾಣಮಾಡಿದ್ದನೋ ಅದೇ ವೇಗದಿಂದ ಮಾತ್ರ ಸಂಚರಿಸಬಹುದಾಗಿದ್ದಿತೆಂಬುದು ಅವನ ಮನಸ್ಸಿಗೆ ಹೊಳೆದು, ಅತೃಪ್ತಿಯನ್ನುಂಟುಮಾಡಿತು. ವಿಜ್ಞಾನದಲ್ಲಿ ಅನೇಕ ಬದಲಾವಣೆಗಳಾಗಿದ್ದರೂ, ಹಡಗುಗಳ ವೇಗವು ಮಾತ್ರ ಮೊದಲಿನಷ್ಟೇ ಇದ್ದಿತು. ಸಮುದ್ರವು ಬಹಳ ಶಾಂತವಾಗಿದ್ದಾಗಲೂ, ಬಿರುಗಾಳಿಯ ರಭಸವು ಹೆಚ್ಚಿದಾಗಲೂ ಅನೇಕ ಸಲ ಹಡಗು ಹೋಗುವುದೇ ಸಾಧ್ಯವಾಗುತ್ತಿರಲಿಲ್ಲ.

ಆದರೂ, ಫುಲ್ಟನ್ ಇಂಗ್ಲೆಂಡಿಗೆ ಹೋದನು. ಅಲ್ಲಿ ಅವನು ಬೆಂಜಮಿನ್ ವೆಸ್ಟ್ ಎಂಬಾತನಲ್ಲಿ ಚಿತ್ರಕಲೆಯನ್ನು ಅಭ್ಯಸಿಸಿದನು. ಅದೇ ಕಾಲದಲ್ಲಿ ಅವನು ಶಿಲ್ಪಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ಪುಸ್ತಕಗಳನ್ನು ಓದಿದನು. ಅಲ್ಲದೆ, ವಾಹನಗಳ ಓಡಾಟದ ವಿಚಾರವಾಗಿ ಸಂಶೋಧನೆಗಳನ್ನು ನಡೆಯಿಸಿ, ಮೇಲ್ಪಾಟುಗಳನ್ನು ಕಂಡುಹಿಡಿದು, ಕೆಲವು ಹಕ್ಕುಗಳನ್ನೂ ಪಡೆದನು. 'ಡೀ' ನದಿಗೆ ಅಡ್ಡಲಾಗಿ ಕಬ್ಬಿಣದ ಎರಕದ ಸಣ್ಣ ಸೇತುವೆಯನ್ನು ಕಟ್ಟುವುದಕ್ಕೆ ಆತನಿಗೆ 'ಕಂಟ್ರಾಕ್ಟ್' ಸಹ ದೊರೆಯಿತು. ಆ ವೇಳೆಗೆ ಆತನು ಸೇತುವೆ ಕಟ್ಟುವ ವಿಷಯದಲ್ಲಿ ಕೇವಲ ಎರಡು ವರ್ಷ ಕಾಲ ಮಾತ್ರ ವ್ಯಾಸಂಗ ನಡೆಯಿಸಿದ್ದನು. ಆದರೂ ಆ ಸೇತುವೆಯನ್ನು ಬಹಳ ಚೆನ್ನಾಗಿ ಕಟ್ಟಿಕೊಟ್ಟನು. ಅದಾದ ಮೇಲೆ, ನಾಲೆಗಳಲ್ಲಿ ನಡೆಸುವ ಪ್ರಯಾಣವನ್ನು ಯಾವ ರೀತಿಯಿಂದ ಬಹುಮಟ್ಟಿಗೆ ಉತ್ತಮಪಡಿಸಬಹು

ದೆಂಬ ವಿಚಾರವಾಗಿ ಒಂದು ಪುಸ್ತಕವನ್ನು ಬರೆದನು. ಅಷ್ಟೇ ಅಲ್ಲದೆ, ಪ್ರಕೃತಿ ಸೌಂದರ್ಯದ ಒಂದು ದೊಡ್ಡ ಚಿತ್ರವನ್ನು ಬರೆಯುವುದಕ್ಕೆ ಆತನಿಗೆ ಪ್ಯಾರಿಸ್ಸಿನಿಂದ ಆಹ್ವಾನ ಬಂದಿತು.

ಆಗ ನೆಪೋಲಿಯನ್ ಪ್ರಬಲನಾಗುತ್ತಿದ್ದ ಕಾಲ. ಬ್ರಿಟಿಷರ ಹಡಗುಗಳನ್ನು ಸಮುದ್ರದಿಂದ ಓಡಿಸಿಬಿಡುವುದಕ್ಕೆ ಫ್ರಾನ್ಸ್ ದಾರಿ ಹುಡುಕುತ್ತಿದ್ದ ಸಮಯ. ಸಮುದ್ರದ ಮೇಲಂತೂ ಆಗ ಬ್ರಿಟಿಷರನ್ನು ಕೆಣಕುವಂತೆಯೇ ಇರಲಿಲ್ಲ. ಆದರೆ, ನೀರಿನ ಒಳಗಿನಿಂದ ಬಂದು ಅವರ ಹಡಗುಗಳನ್ನು ಮುಳುಗಿಸಿದರೆ? ಇಂಗ್ಲೆಂಡಿನಲ್ಲಿ ಫುಲ್ಟನ್ ಹತ್ತು ವರ್ಷ ವಾಸಿಸಿದ್ದನು. ಆದರೂ ಆ ಬಗೆಯ ಸಂಶೋಧನೆಯನ್ನು ಮಾಡುವಾಗ ಮಾತ್ರ ಅದರಿಂದ ನೆಪೋಲಿಯನ್‌ಗೆ ಸಹಾಯವಾಗಬಹುದೆಂದು ಧೃತಿಗೆಟ್ಟು ತಲೆ ಕೆಡಿಸಿಕೊಳ್ಳದೆ ಪ್ರಯೋಗಗಳನ್ನು ಮುಂದುವರಿಸಿದನು. ಸಮುದ್ರದ ಅಡಿಯಲ್ಲಿ ಓಡಾಡುವ 'ನಾಟಿಲಸ್' ಎಂಬ ನಾವೆಯನ್ನು ತಾನು ಕಟ್ಟುವುದಾಗಿ ಫ್ರಾನ್ಸ್ ಸರ್ಕಾರಕ್ಕೆ ತಿಳಿಸಿದನು. ಅಲ್ಲದೆ, ತಾನು ಕಟ್ಟಿದ ನಾವೆಯಿಂದ ಮುಳುಗುವ ಪ್ರತಿಯೊಂದು ಬ್ರಿಟಿಷ್ ಬಂದೂಕಕ್ಕೂ ತನಗೆ 40 ರಿಂದ 2,000 ದ ವರೆಗಿನಷ್ಟು ಪೌಂಡುಗಳನ್ನು ಕೊಡಬೇಕೆಂದೂ ಒಪ್ಪಂದ ಸೂಚಿಸಿದನು. ಆ ವಿಚಾರವಾಗಿ ಫ್ರೆಂಚ್ ಜನರಲ್ಲಿ ದೊಡ್ಡ ಕೋಲಾಹಲ ಎದ್ದಿತು. ಆದರೆ ಒಪ್ಪಂದ ಜಯಪ್ರದವಾಗಲಿಲ್ಲ. ಅಷ್ಟೇಕೆ, ಇಂಗ್ಲೆಂಡನ್ನು ಸಮುದ್ರ ಮಾರ್ಗದಿಂದ ಮುತ್ತಬೇಕೆಂಬ ಹಂಚಿಕೆಯೇ ಕಾರ್ಯರೂಪಕ್ಕೆ ಬರಲಿಲ್ಲ. ಫುಲ್ಟನ್, ಅನಂತರ ಇನ್ನೊಂದು ಪ್ರಯೋಗವನ್ನು ಆಲೋಚಿಸಿದನು. ಗುಂಡು ಮದ್ದು ತುಂಬಿದ ನೌಕೆಯೊಂದನ್ನು ಸಮುದ್ರದ ಕೆಳಗಡೆಯಿಂದ ನಡೆಯಿಸಿಕೊಂಡು ಹೋಗಿ, ಶತ್ರುಗಳ ಹಡಗುಗಳನ್ನು ಮುಳುಗಿಸುವ 'ಟಾರ್ಪೆಡೋ'ವನ್ನು ತಯಾರಿಸಬೇಕೆಂಬುದೇ ಆ ಯೋಜನೆ. ಅದರಿಂದ ಬ್ರಿಟಿಷ್ ನೌಕೆಗಳನ್ನೆಲ್ಲಾ ಮುಳುಗಿಸಬಹುದೆಂದು ಫುಲ್ಟನ್ ಯೋಚಿಸಿದನು. ಆದರೆ, ಅದೂ ಕಾರ್ಯತಃ ಸಾಧ್ಯವಾಗಲಿಲ್ಲ. 'ಟಾರ್ಪೆಡೋ'ವನ್ನು ತಯಾರಿಸುವುದರಲ್ಲೇನೋ ಸ್ವಲ್ಪ ಜಯ ಸಿದ್ಧಿಸಿತು. ಒಂದು ಹಳೆಯ ಹಡಗನ್ನು ಅದರಿಂದ ಚೂರುಚೂರು ಮಾಡಿ ಪ್ರದರ್ಶಿಸಿದುದೂ ಆಯಿತು. ನೆಪೋಲಿಯನ್ನನಿಗೂ ಆಗ ಆ ವಿಚಾರದಲ್ಲಿ ಉತ್ಸುಕತೆ ಉಂಟಾಗಿದ್ದಿತು.

ಆದರೆ, ಫ್ರಾನ್ಸಿನ ನೌಕಾಶಾಖೆಯವರು ಆ ವಿಚಾರದಲ್ಲಿ ತಳೆದ ಮನೋಭಾವವು, ಅರವತ್ತು ವರ್ಷಗಳ ಹಿಂದೆ 'ಸಬ್-ಮೆರೀನಿ'ನ ವಿಚಾರದಲ್ಲಿ ಬ್ರಿಟಿಷರ ನೌಕಾಶಾಖೆಯವರು ಹೊಂದಿದ್ದ ಮನೋಭಾವದಂತೆಯೇ ನಿರುತ್ಸಾಹಕರವಾಗಿದ್ದಿತು. 'ಟಾರ್ಪೆಡೋ'ವಿನಂಥ ಕೇವಲ ಅನಾಗರಿಕ ಯುದ್ಧವಿಧಾನವನ್ನು ಅನುಸರಿಸುವುದಕ್ಕೆ ಫ್ರೆಂಚ್ ನೌಕಾಶಾಖೆಯವರು ಒಪ್ಪದೆ ಹೋದರು.

ಕಡೆಗೆ, ಫ್ರಾನ್ಸಿನಲ್ಲಿ ಅಮೇರಿಕದ ರಾಯಭಾರಿಯೂ, ಫುಲ್ಟನನ ಸ್ನೇಹಿತನೂ ಆದ ರಾಬರ್ಟ್ ಲಿವಿಂಗ್ಸ್ಟನ್ನನು, "ಹಬೆ ಹಡಗನ್ನಾದರೂ ನಿರ್ಮಿಸಲು ಪ್ರಯತ್ನಿಸಬಾರದೇಕೆ ?" ಎಂದು ಸಲಹೆ ಕೊಟ್ಟನು. ಹಬೆ ಹಡಗಿನ ವಿಚಾರವಾಗಿ ಆ ಇಬ್ಬರು ಸ್ನೇಹಿತರೂ ಅನೇಕ ವೇಳೆ ಮಾತನಾಡಿದ್ದರು. ತಾನೂ ಆ ಪ್ರಯೋಗದಲ್ಲಿ ಸಹಕರಿಸುವುದಾಗಿ ಲಿವಿಂಗ್ಸ್ಟನ್ ಹೇಳಿದನು. ಆ ಪರಿಶೀಲನೆಯ ವಿಚಾರವಾಗಿ ಅದಕ್ಕೆ ಹಿಂದೆ ಹಲವು ಪ್ರಯೋಗಗಳು ನಡೆದಿದ್ದುವು.

1801 ರಲ್ಲಿ ಸಿಮಿಂಗ್ಟನ್ ಎಂಬಾತನು ನಿರ್ಮಿಸಿದ 'ಚಾರ್ಲೊಟ್ ಡಂಡಾಸ್' ಎಂಬ ಹೆಸರಿನ ಹಬೆ – ದೋಣಿಯನ್ನು ಸ್ಕಾಟ್ಲೆಂಡಿನ 'ಫರ್ತ್ ಆಫ್ ಫೋರ್ತ್ ' ಕಾಲುವೆಯಲ್ಲಿ ನಡೆಯಿಸಿದ್ದನು. ಮೊದಲನೆಯ ಪ್ರಯಾಣದಲ್ಲೇ ಹಬೆ—ದೋಣಿಯು ಹೆಚ್ಚಳ ತಿಳಿದಿದ್ದಿತು. ಆ ಪ್ರಯಾಣದ ವೇಳೆಯಲ್ಲಿ ಬಿರುಗಾಳಿ ಬೀಸುತ್ತಿದ್ದಿತು. ಆ ಬಿರುಗಾಳಿಯ ರಭಸದಿಂದ, ಬೇರೆ ಯಾರೂ ಕಾಲುವೆಯಲ್ಲಿ ಪ್ರಯಾಣ ನಡೆಯಿಸುತ್ತಿರಲಿಲ್ಲ. ಮತ್ತು 'ಚಾರ್ಲೊಟ್ ಡಂಡಾಸ್' ಮಾತ್ರ ನಿರಾಯಾಸವಾಗಿ ಮುಂದುವರಿಯಿತು. ಆದರೆ, ಪ್ರಯೋಗಗಳು ಅಲ್ಲಿಗೇ ನಿಲ್ಲಬೇಕಾಯಿತು. ಏಕೆಂದರೆ, ಕಾಲುವೆಯ ಮಾಲೀಕರು, ದೋಣಿ ಹಾಯುವ ವೇಗಕ್ಕೆ ನೀರು ದಡಕ್ಕೆ ಅಪ್ಪಳಿಸುವುದರಿಂದ ತಮ್ಮ ಕಾಲುವೆಯ ದಡಗಳು ಕೆಟ್ಟು ಹೋಗುತ್ತವೆ, ಎಂಬುದಾಗಿ ಆಕ್ಷೇಪಿಸಿದರು.

ಸಿಮಿಂಗ್ಟನನ ಸಂಶೋಧನೆಯ ಗತಿ ಹೀಗಾಯಿತಷ್ಟೆ ? ಈಗ ಫುಲ್ಟನ್ ಮತ್ತು ಲಿವಿಂಗ್ಸ್ಟನ್ ಇವರಿಬ್ಬರೂ ಕೆಲಸಕ್ಕೆ ಪ್ರಾರಂಭಿಸಿದರು. ಮೊಟ್ಟಮೊದಲು ಅವರು ಪ್ಯಾರಿಸ್ಸಿನಲ್ಲಿ ಒಂದು 'ಇಂಜಿನ'ನ್ನು ಕೊಂಡುಕೊಂಡರು.

ಅದು ವಾಟನು ತಯಾರಿಸಿದಂಥ 'ಇಂಜಿನು.' ಆ 'ಇಂಜಿನ'ನ್ನು ಜೋಡಿಸಿ ಅವರು ಒಂದು ಹಡಗನ್ನು ಕಟ್ಟಿದರು. ಆದರೆ ' ಇಂಜಿನ್ ' ಯಂತ್ರವು ಬಹು ಭಾರವಾಗಿದ್ದಿತು. ಹಡಗು ಇಬ್ಭಾಗವಾಗಿ ಒಡೆದು ಮುಳುಗಿತು. ಅದಾದ ಒಂದು ವರ್ಷದ ಮೇಲೆ ಆ ಸ್ನೇಹಿತರಿಬ್ಬರೂ ಇನ್ನೂ ದೊಡ್ಡ ಹಡಗನ್ನು ಕಟ್ಟಿ ಅದಕ್ಕೆ ತಕ್ಕಂಥ ದೊಡ್ಡ 'ಇಂಜಿನ'ನ್ನು ಜೋಡಿಸಿದರು. ಆ ದೊಡ್ಡ ಹಡಗನ್ನು ನಡೆಯಿಸುವುದಕ್ಕೆ ಮುಂಚಿತವಾಗಿ ಫುಲ್ಟನನು ನೆಪೋಲಿಯನ್ ಬೋನಪಾರ್ಟನನ್ನು ಕಂಡುಬರಬೇಕೆಂದು ಉದ್ದೇಶಿಸಿ ತನ್ನ ನಕಾಸೆಗಳನ್ನೆಲ್ಲಾ ಆತನ ಪರಾಮರ್ಶೆಗಾಗಿ ಕಳುಹಿಸಿಕೊಟ್ಟು, ಭೇಟಿಗೆ ಅವಕಾಶ ಕೋರಿದನು. ಬೋನಪಾರ್ಟ್ ಆ ಸಮಯದಲ್ಲಿ ಇಂಗ್ಲೆಂಡಿನ ಮೇಲೆ ಧಾಳಿ ನಡೆಯಿಸುವ ಏರ್ಪಾಟನ್ನು ಮಾಡುತ್ತ 'ಬೊಲೋನ್' ಎಂಬಲ್ಲಿ ಶಿಬಿರವನ್ನು ಹಾಕಿಕೊಂಡಿದ್ದನು. ಅಲ್ಲಿಂದಲೇ ಆತನು ತನ್ನ ಒಳಾಡಳಿತ ಸಚಿವನಿಗೆ 1804 ನೆಯ ಇಸವಿ ಜುಲೈ ತಿಂಗಳಿನಲ್ಲಿ ಪತ್ರ ಬರೆದು ಈ ರೀತಿ ತಿಳಿಸಿದನು :—

"ಫುಲ್ಟನನ ಯೋಜನೆಯನ್ನು ಇದೀಗ ಓದಿದೆ. ಅದನ್ನು ಕಳುಹಿಸಿ ಕೊಡುವುದರಲ್ಲಿ ಬಹಳ ವಿಳಂಬಮಾಡಿರುತ್ತೀರಿ. ಆ ಯೋಜನೆಯಿಂದ ವಿಶ್ವದ ವ್ಯವಹಾರಗಳೇ ಪೂರ್ತಿಯಾಗಿ ಬದಲಾವಣೆಯಾಗಬಹುದು. ಕೂಡಲೆ ಒಂದು ಸಮಿತಿಯನ್ನು ರಚಿಸಿ, ಆ ಯೋಜನೆಯನ್ನು ಅವರ ಪರಿಶೀಲನೆಗೆ ಒಪ್ಪಿಸಿರಿ. ಆಧುನಿಕ ವಿಜ್ಞಾನದಲ್ಲಿ ಪರಿಣತರಾಗಿ, 'ಅಕ್ಯಾಡಮಿ'ಗೆ ಸೇರಿರತಕ್ಕವರೇ ಸಮಿತಿಯ ಸದಸ್ಯರಾಗಿರಬೇಕೆಂದು ಸೂಚಿಸಿ. ಈ ವಿಚಾರವನ್ನು ಜಾಗ್ರತೆ ಪರಿಶೀಲಿಸಲು ಏರ್ಪಾಟು ಮಾಡಿರಿ. ಆ ಯೋಜನೆಯಲ್ಲಿ ಒಂದು ಭಾರಿ ವಿಜ್ಞಾನತತ್ತ್ವವು ಅಡಕವಾಗಿರುವಂತಿದೆ. ನಮ್ಮ ವೈಜ್ಞಾನಿಕರು ಅದನ್ನು ಪರಿಶೀಲಿಸಿ, ಅದು ಉಪಯೋಗಕರವಾಗುವಂತೆ ಮಾಡಬೇಕಾಗಿದೆ. ಅವರ ಪರಿಶೀಲನೆಯ ಫಲಿತಾಂಶವನ್ನು ತಿಳಿಯಲು ತವಕಪಡುತ್ತಿದ್ದೇನೆ. ಫಲಿತಾಂಶವನ್ನು ಸಾಧ್ಯವಾದಲ್ಲಿ ಒಂದು ವಾರದೊಳಗೆ ವರದಿಮಾಡಿರಿ."—ನೆಪೋಲಿಯನ್.

ನೆಪೋಲಿಯನ್ನನಿಗೇ ಇಷ್ಟುಮಟ್ಟಿನ ಉತ್ಸಾಹವಿದ್ದಿತಾದರೂ ಆಗಿನ ಫ್ರಾನ್ಸ್ ದೇಶದ ವಿದ್ವನ್ಮಂಡಲಿಯವರಿಗೆ ಆ ಸಂಶೋಧನೆಯ ವಿಚಾರದಲ್ಲಿ

ನೆಪೋಲಿಯನ್ನನಷ್ಟು ಉತ್ಸಾಹ ಬರಲಿಲ್ಲ. ಫುಲ್ಟ್‌ನ್ ಸೂಚಿಸಿದ್ದ ಕಾರ್ಯ ಕ್ರಮಕ್ಕೆ ಅವರ ವರದಿಯು ತೀರಾ ಅನನುಕೂಲವಾಗಿದ್ದಿತು. ಫುಲ್ಟನನು ಬಹು ಕಷ್ಟಪಟ್ಟಮೇಲೆ ಕಟ್ಟಕಡೆಗೆ ನೆಪೋಲಿಯನ್ನನನ್ನು ಭೇಟಿ ಮಾಡುವ ಅವಕಾಶವೇನೋ ದೊರೆಯಿತು. ಆದರೆ ಆ ವೇಳೆಗೆ ನೆಪೋಲಿಯನ್ನನಿಗೆ ಹೋಗಿದ್ದ ವರದಿಯಿಂದ ಆತನ ಮನಸ್ಸು ಪರಿವರ್ತಿತವಾಗಿಬಿಟ್ಟದ್ದಿತು. ಫುಲ್ಟ್‌ನ್ ಭೇಟಿಮಾಡಿದಾಗ ನೆಪೋಲಿಯನ್ನನು: "ನೀವು ಚುಟ್ಟಾ ಹೊಗೆ ಯಿಂದ ಹಡಗನ್ನು ನಡೆಯಿಸಬೇಕೆಂದು ಹಂಚಿಕೆ ಹಾಕುತ್ತಿರುವಂತಿದೆ" ಎಂದು ಫುಲ್ಟ್‌ನನ್ನು ಹಾಸ್ಯ ಮಾಡುವಂತಾಯಿತು.

ಹಡಗೇನೋ ಸೀನ್ ನದಿಯಲ್ಲಿ ಪ್ರಯಾಣಕ್ಕೆ ಸಿದ್ಧವಾಗಿ ನಿಂತಿದ್ದಿತು. ಪ್ಯಾರಿಸ್ ನಗರದ ಜನರು, "ಇದು ಕುದಿಯುವ ನೀರಿನಿಂದ ಓಡುತ್ತದೆ" ಎಂದು ತಮ್ಮತಮ್ಮೊಳಗೇ ಮಾತನಾಡಿಕೊಳ್ಳುತ್ತಿದ್ದರು. ಆ ಜನರಿಗೂ ಅಂಥ ಹಡಗಿನ ವಿಚಾರದಲ್ಲಿ ಶ್ರದ್ಧೆ ಹುಟ್ಟಲಿಲ್ಲ. ಆದರೂ ಸಹ, ತಾವಾಗಿ ಮುಂದೆ ಬಂದ ಕೆಲವು ಜನರನ್ನು ಕೂಡಿಸಿಕೊಂಡು, ಫುಲ್ಟ್‌ನ್ ಮತ್ತು ಲಿವಿಂಗ್‌ಸ್ಟನ್ ಹಡಗನ್ನು ನಡೆಸಿಯೇ ಬಿಟ್ಟರು. ಅಷ್ಟಾದರೂ ಸಹ ಹೆಚ್ಚು ಜನ ನಿರುತ್ಸಾಹಿಗಳಾಗಿಯೇ ಇದ್ದರು. ಫುಲ್ಟ್‌ನ್ ಇಂಗ್ಲೆಂಡಿಗೆ ಹಿಂದಿರುಗಿ, 'ಟಾರ್ಪೆಡೋ'ವನ್ನು ಫ್ರೆಂಚರಿಗೆದುರಾಗಿ ಉಪಯೋಗಿಸುವುದಕ್ಕೆ ಒಪ್ಪಿ ಕೊಳ್ಳಿರೆಂದು ಇಂಗ್ಲೆಂಡಿನ ಸರ್ಕಾರದವರನ್ನು ಕೇಳಿಕೊಂಡನು. ಅವರು ಅವನ ಸಹಾಯಕ್ಕೆ ಕೃತಜ್ಞತೆ ಸೂಚಿಸಿ, ಆಗ್ಗೆ ತಮಗೆ ಆ ಸಹಾಯವು ಆವಶ್ಯಕವಿಲ್ಲವೆಂದು ನಿರಾಕರಿಸಿಬಿಟ್ಟರು.

ಆದರೆ, ಅಮೆರಿಕಾದ ಸರ್ಕಾರದವರು ಫುಲ್ಟ್‌ನನಿಗೆ ಹಬೆ-ದೋಣಿಗಳ ವಿಚಾರವಾಗಿ ಪ್ರಯೋಗಗಳನ್ನು ನಡೆಯಿಸುವುದಕ್ಕಾಗಿ 15,000 ಡಾಲರು ಗಳನ್ನು ಕೊಟ್ಟರೆಂದು ಅವನಿಗೆ ಲಿವಿಂಗ್‌ಸ್ಟನ್ನನಿಂದ ತಿಳಿದುಬಂದಿತು. ಆ ಉದ್ದೇಶಕ್ಕಾಗಿ ಸರಿಯಾದ ಒಂದು ಹಬೆ-ಎಂಜಿನನ್ನು ಕೊಂಡುಕೊಳ್ಳುವುದ ಕ್ಕಾಗಿ ಫುಲ್ಟನ್ನನು ಸೋಹೋದಲ್ಲಿದ್ದ 'ಬೌಲ್ಟ್‌ನ್ ಕಾರ್ಖಾನೆ'ಗೆ ಹೋದನು.

ಫುಲ್ಟ್‌ನ್ ಬೆಲೆಗೆ ಕೇಳಿದ್ದುದು 30 ಅಶ್ವಶಕ್ತಿಗಳ ಇಂಜಿನು. ಅದನ್ನು ತಯಾರಿಸುವ ಕೆಲಸವು ಬೌಲ್ಟ್‌ನ್ ಕಾರ್ಖಾನೆಯಲ್ಲಿ ನಡೆಯುತ್ತಿದ್ದಿತು. ಆದರೆ ಅದೇ ಸಮಯದಲ್ಲೇ ನ್ಯೂಯಾರ್ಕ್ ನಗರದ 'ಈಸ್ಟ್ ರಿವರ್'

ಎಂಬಲ್ಲಿ ಚಾರಲ್ಸ್ ಬ್ರೌನ್ ಎಂಬಾತನು ತನ್ನ ಹಡಗಿನ ಕಾರ್ಖಾನೆಯಲ್ಲಿ ಒಂದು ಹಬೆ-ಹಡಗನ್ನು ತಯಾರಿಸಿದ್ದನು. ಅದನ್ನು 1807 ನೆಯ ಇಸವಿಯಲ್ಲಿ ಆತನು ನದಿಗೆ ತಂದನು. 150 ಟನ್ನುಗಳಷ್ಟು ತೂಕವುಳ್ಳು ದಾಗಿ ಆ ಹಡಗು ಒಳ್ಳೇ ದೃಢವಾಗಿದ್ದಿತು. ಲಿವಿಂಗ್ಸ್ಟನ್ನನ ತವರೂ ರಾದ 'ಕ್ಲೇರ್‌ಮಾಂಟ್' ಎಂಬ ಸ್ಥಳದ ಹೆಸರನ್ನೇ ಆ ಹಡಗಿಗೆ ಕೊಟ್ಟಿ ದ್ದರು. 1807 ನೆಯ ಇಸವಿ ಆಗಸ್ಟ್ 17 ನೆಯ ತಾರೀಖಿನ ದಿನ ಆ ಹಡಗು ಹಡ್ಸನ್ ಬೇ ಕೊಲ್ಲಿಯಲ್ಲಿ ನಿಂತಿದ್ದಿತು. 30 ಅಡಿ ಎತ್ತರದ ಕೊಳವೆ ಯುಳ್ಳುದಾಗಿ, ಕಪ್ಪು ಹೊಗೆಯನ್ನು ಉಗುಳುತ್ತಿದ್ದ ಆ ಹಡಗು ಒಂದು ವಿಕಟವಾದ, ಕ್ರೂರವಾದ ಭೂತದಂತಿದ್ದಿತು. ಹಡಗು ಹೋಗುವ ಸಂಭ್ರ ಮದ ದೃಶ್ಯವನ್ನು ನೋಡುವುದಕ್ಕಾಗಿ ಸಾವಿರಾರು ಮಂದಿ ಪಟ್ಟಣಿಗರು ದಡದಲ್ಲಿ ಸೇರಿಬಿಟ್ಟಿದ್ದರು. ಆ ಹಬೆ-ಹಡಗಿಗೆ 'ಫುಲ್ಟನ್ನನ ಮೌಢ್ಯ' ಎಂದು ತಮಾಷೆಯಾಗಿ ಹೆಸರಿಟ್ಟಿದ್ದರು. ಆ ಕೊನೆಯಿಂದ ಈ ಕೊನೆಗೆ 120 ಅಡಿಗಳ ಉದ್ದವಾಗಿಯೂ, 15 ಅಡಿಗಳ ಅಗಲವಾಗಿಯೂ, ದೊಡ್ಡ ಕೊಳ ವೆಯನ್ನುಳ್ಳುದಾಗಿಯೂ, ಸುತ್ತುವ ಭಾರಿ ಚಕ್ರಗಳುಳ್ಳುದಾಗಿಯೂ, ದೊಡ್ಡ ಪೆಟ್ಟಿಗೆಯಂತೆಯೂ ಇದ್ದ ಆ ವಸ್ತುವು ಮುಳುಗದೆಯೂ, ಒಡೆಯದೆಯೂ ಐದು ನಿಮಿಷಗಳಿಗಿಂತ ಹೆಚ್ಚು ಕಾಲ ನೀರಿನಲ್ಲಿ ಮುಂದಕ್ಕೆ ಹೋಗಬಲ್ಲು ದೆಂದು ಅಲ್ಲಿದ್ದವರು ಯಾರೂ ನಂಬಲಿಲ್ಲ.

ಆಹ್ವಾನಿಸಲ್ಪಟ್ಟಿದ್ದ ಕೆಲವರು ದೊಡ್ಡ ಮನುಷ್ಯರುಗಳೊಡನೆ ಫುಲ್ಟನ್ ಬಂದನು. ನೆರೆದಿದ್ದವರೆಲ್ಲಾ ಘೊಳ್ಳೆಂದು ನಕ್ಕು: "ಅಣ್ಣಯ್ಯನ ಬಂಡ ವಾಳ ತಿಳಿಯುತ್ತೆ ಈಗ!" ಎಂದರು. ಹಡ್ಸನ್ ಕೊಲ್ಲಿಯಿಂದ ಪ್ರಾರಂಭಿಸಿ ಆಲ್ಬನಿಯ ವರೆಗೆ ಮೊದಲನೆಯ ಪರೀಕ್ಷೆಗಾಗಿ, ಹಡಗು ಹೋಗಬೇಕೆಂಬು ದಾಗಿ ಗೊತ್ತಾಗಿದ್ದಿತು.

ಅಲ್ಲಿದ್ದ ಕೆಲವರು ಬುದ್ಧಿವಂತರು—ತಾವು ಬೃಹಸ್ಪತಿಯ ಮರಿಮಕ್ಕ ಳೆಂದೇ ತಿಳಿದಿದ್ದರು: "ಹಾಗೆಯೇ ಉತ್ತರ ಧ್ರುವದ ವರೆಗೂ ಸವಾರಿ ಹೋಗಿ ಬಾರೋ, ಅಣ್ಣಾ!" ಎಂದು ಮೂದಲಿಸಿದರು. ಫುಲ್ಟನ್ ಹಡಗಿನ 'ಕ್ಯಾಪ್ಟನ'ನಂತೆ ಸಮವಸ್ತ್ರ ಧರಿಸಿದ್ದನು. ಜನರ ಹಾಸ್ಯ, ಅವ ಹೇಳನಗಳಿಂದ ಅವನು ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ನಗುನಗುತ್ತಾ

ಹಡಗನ್ನೇರಿದನು. "ಸ್ವಲ್ಪ ತಡೆಯಿರೋ ದಡ್ಡರಿರಾ!" ಎಂದುಕೊಂಡನೇನೋ? ಎಷ್ಟಾದರೂ ತುಂಬಿದ ಕೊಡ ತುಳುಕುವುದೆ? ಒಂದೆರಡು ನಿಮಿಷಗಳ ಅನಂತರ ಅವನು ಹಡಗು ಹೊರಡಬಹುದೆಂದು ಅನುಜ್ಞೆ ಕೊಟ್ಟನು.

ಹಡಗಿನ ಕೊಳವೆಯಿಂದ ದಟ್ಟವಾದ ಹೊಗೆಯ ಮೋಡಗಳು ಎದ್ದುವು. ತೀರದ ಕಂಬಗಳಿಗೆ ಬಿಗಿದಿದ್ದ ಸರಪಣಿಗಳನ್ನು ಬಿಚ್ಚಲಾಯಿತು. ಹಡಗನ್ನೇರಿದ್ದ ದೊಡ್ಡ ಮನುಷ್ಯರಿಗೇಕೋ ಸ್ವಲ್ಪ ಸಂಕೋಚವಾಯಿತು. ಆದರೆ ಇಳಿದುಬಿಡುವುದಕ್ಕೆ ಕಾಲ ಮಿಂಚಿ ಹೋಗಿದ್ದಿತು. ಒಂದು ಸಾವಿರ ದೆವ್ವಗಳ ಧ್ವನಿಯಂತೆ ಹಡಗು ಸಿಳ್ಳೆ ಹಾಕಿತು. ಚಕ್ರಗಳು ಗಿರ್ರೆಂದು ತಿರುಗಿದುವು. ಹಡಗು ಮೊದಲು ಮೆಲ್ಲನೆ ಮುಂದುವರಿಯಿತು. ಮುಂದುವರಿದು, ಕೊಲ್ಲಿಯ ಒಳಭಾಗಕ್ಕೆ ನುಗ್ಗಿತು. ಅಲ್ಲಿಂದಾಚೆಗೆ ಅದು ಗಾಳಿಯು, ಅಲೆಗಳ ಲಕ್ಷ್ಯವಿಲ್ಲದೆ – ಪಟಗಳಿಲ್ಲದಿದ್ದರೂ ಸಹ – ಗಂಭೀರವಾಗಿ, ವೇಗವಾಗಿ ಓಡಿತು. ನೋಡುತ್ತಿದ್ದವರಿಗೆ ಅದೊಂದು ವಿಚಿತ್ರವಾದ, ಅತ್ಯಾಶ್ಚರ್ಯಕರವಾದ, ನೋಟವೆನ್ನಿಸಿತು. ಜನಗಳೆಲ್ಲಾ ಜಯಕಾರ ಮಾಡಿದರು. ಚಪ್ಪಾಳೆ ಹೊಡೆದರು. ಸಿಳ್ಳೆಹಾಕಿ, ನಕ್ಕು ನಲಿದರು. ಅಂತು ಫುಲ್ಟನ್ ಗೆದ್ದೇ ಗೆದ್ದನು.

ಏಳು ವರ್ಷಗಳಾದ ಮೇಲೆ, ಎಂದರೆ 1814 ರಲ್ಲಿ ಫುಲ್ಟನ್ನನು ನೌಕಾ ಶಾಖೆಯವರಿಗೆ ಒಂದು ಯುದ್ಧದ ಹಡಗನ್ನು ತಯಾರಿಸಿ ಕೊಟ್ಟನು. ಅದು ಸಮುದ್ರದಲ್ಲಿ ಪ್ರಯಾಣ ಮಾಡಿದಾಗ ಪತ್ರಿಕೆಗಳಲ್ಲೆಲ್ಲಾ ಅದನ್ನು ಹೊಗಳಿ ದೊಡ್ಡ ದೊಡ್ಡ ಲೇಖನಗಳು ಬಂದುವು.

ಮುಂದೆ ಹತ್ತು ವರ್ಷಗಳಾದ ಮೇಲೆ ಒಂದು ದಿನ ಇಂಗ್ಲೆಂಡಿನ "ಹೌಸ್ ಆಫ್ ಕಾಮನ್ಸ್" ಸಭೆಯ "ಪಾರ್ಲಿಮೆಂಟರಿ ಸಮಿತಿ"ಯವರು ಒಂದು ಮಹತ್ತ್ವಪೂರ್ಣ ವಿಷಯವನ್ನು ಚರ್ಚಿಸಬೇಕಾಗಿದ್ದಿತು. ಆದರೆ, ಅದೇಕೋ ಸಮಿತಿಯವರಿಗೆ ಅಂದಿನ ಚರ್ಚೆಯ ವಿಷಯದ ಮೇಲೆ ಆಸಕ್ತಿಯೇ ಉಂಟಾಗಿದ್ದಂತೆ ಕಾಣುತ್ತಿರಲಿಲ್ಲ. ಅಂದಿನ ಚರ್ಚೆಯು, "ಲಿವರ್ಪೂಲ್ ಪಟ್ಟಣದಿಂದ ಮ್ಯಾಂಚೆಸ್ಟರ್ ಪಟ್ಟಣದವರೆಗೆ ಒಂದು 'ರೈಲ್ವೆ' ಅಥವಾ 'ಟ್ರಾಂವೆ'ಯನ್ನು ಹಾಕಿ, ಅದನ್ನು ಸರಿಯಾದ ಸ್ಥಿತಿಯಲ್ಲಿಟ್ಟುಕೊಳ್ಳುವುದಕ್ಕೆ

ಅನುಮತಿ ಕೊಡುವ ಕಾನೂನನ್ನು ಏರ್ಪಡಿಸುವ" ವಿಚಾರವಾಗಿದ್ದಿತು. ಚರ್ಚೆಯು ಆ ವಿಚಾರದ ಮೇಲೆ ನಡೆಯುವುದಾಗಿದೆಯೆಂಬುದನ್ನು ತಿಳಿಸುವಂಥ 'ನೋಟೀಸು'ಗಳು ಸದಸ್ಯರ ಮುಂದಿದ್ದುವು. ಸದಸ್ಯರೆಲ್ಲರೂ ಸಭೆಗೆ ಬಂದು ಕುಳಿತುಕೊಂಡ ಕೂಡಲೆ 'ನೋಟೀಸ'ನ್ನು ಓದಿದರು. ಆದರೂ ಆ ವಿಚಾರದಲ್ಲಿ ಅವರಿಗೇಕೋ ತಾತ್ಸಾರ, ನಿರುತ್ಸಾಹ. ಅಂಥ ಒಂದು ಕಾನೂನನ್ನು ಚರ್ಚಿಸುತ್ತ ಸಭೆಯಲ್ಲಿ ಕುಳಿತಿರುವ ಬದಲಾಗಿ ಹೊರಗಡೆ ಕುದುರೆ ಸವಾರಿಮಾಡುತ್ತ ಸಂತೋಷದಿಂದಿರುವುದು ಒಳ್ಳೆಯದೆಂದು ಸದಸ್ಯರುಗಳಲ್ಲಿ ಯುವಕರಾಗಿದ್ದವರು ಯೋಚಿಸಿದರು. ವೃದ್ಧರಾಗಿದ್ದ ಸದಸ್ಯರು, "ಪಾರ್ಲಿಮೆಂಟ್ ಸಭೆಯ ಪಕ್ಕದ ಕಟ್ಟಡದಲ್ಲಿದ್ದ 'ಕ್ಲಬ್ಬಿ'ನಲ್ಲಿ ಸುಖವಾಗಿ ಕುಳಿತಿರುವ ಬದಲಾಗಿ, ಇಲ್ಲಿ ಈ ಒಣಚರ್ಚೆಯಿಂದ ಆಗಬೇಕಾದುದೇನು" – ಎಂದು ಬೇಸರಪಟ್ಟುಕೊಂಡಿದ್ದರು.

ಅಂದಿನ ಚರ್ಚಾವಿಷಯವು ರಾಷ್ಟ್ರದ ಭಾವೀ ಸ್ಥಿತಿಗತಿಗಳಿಗೆ ಎಷ್ಟು ಮುಖ್ಯವಾಗಿದ್ದಿತೆಂಬುದು ಅಲ್ಲಿದ್ದವರಲ್ಲಿ ಪ್ರಾಯಶಃ ಹತ್ತು ಹನ್ನೆರಡಕ್ಕಿಂತ ಹೆಚ್ಚು ಮಂದಿ ಸದಸ್ಯರಿಗೆ ತಿಳಿದಿದ್ದಿರಲಾರದು. ಅಂದಿನ ಚರ್ಚೆಯು ರೈಲುಗಾಡಿಯ ವಿರುದ್ಧವಾಗಿಯೂ ಮತ್ತು ಆಗ ತಾನೇ ಉದಯಿಸುತ್ತಿದ್ದ ಹೊಸ ಯಂತ್ರಯುಗದ ವಿರುದ್ಧವಾಗಿಯೂ ನಡೆಯುವ ಕೊನೆಯ ಹೋರಾಟವಾಗಿದ್ದಿತು. ಆ ಕಾಲದಲ್ಲಿ ಬ್ರಿಡ್ಜ್‌ವಾಟರ್ ನಗರದ ಡ್ಯೂಕನ ಗಣಿಗಳಿಂದ ಲಿವರ್ಪೂಲ್ ಬಂದರಿಗೆ ಕಲ್ಲಿದ್ದಲನ್ನು ಒಂದು ನಾಲೆಯ ಮಾರ್ಗವಾಗಿ ಒಯ್ಯುತ್ತಿದ್ದರು. ಆ ನಾಲೆಯಿಂದ ಅದರ ಇಬ್ಬರು ಮಾಲೀಕರಿಗೆ, ಎಂದರೆ ಲಾರ್ಡ್ ಡರ್ಬಿ ಮತ್ತು ಲಾರ್ಡ್ ಸೆಫ್ಟನ್ – ಇವರಿಬ್ಬರಿಗೆ ಸಲ್ಲುತ್ತಿದ್ದ ಲಕ್ಷಾಂತರ ಪೌಂಡುಗಳ ಲಾಭವು, ಆ ರೈಲ್ವೆ ಸಾಲನ್ನು ಹಾಕಿದಲ್ಲಿ ನಿಂತುಹೋಗುವ ಸಂಭವವಿದ್ದಿತು. ಆ ಇಬ್ಬರು ಮಾಲೀಕರ ಪರವಾಗಿ ಮಾತನಾಡಿ, ಹೊಸ ಸಂಶೋಧನೆಗಳನ್ನು ಅಲ್ಲಗಳೆದು, ಹಳೆಯ ಪದ್ಧತಿಗಳನ್ನು ಹೊಗಳುವಂಥ ಅವರ ಕೆಲವು ಮಂದಿ ಸ್ನೇಹಿತರು, ಸಮಿತಿಯ ಸದಸ್ಯರಾಗಿದ್ದರು. ಅವರೆಲ್ಲರೂ—ಎಂದರೆ ಆಲ್ಡರ್ಸನ್, ಪಾರ್ಕ್, ರೋಸ್, ಮ್ಯಾಕ್ಡಾನಲ್, ಹ್ಯಾರಿಸನ್, ಯರ್ಲ್, ಕ್ಯರ್ಲನ್—ಮೊದಲಾದವರೆಲ್ಲರೂ ಚತುರ ವಾಗ್ಮಿಗಳಾಗಿದ್ದರು. ನಾರ್ದಂಬರ್‌ಲ್ಯಾಂಡಿನ ವಿಜ್ಞಾನಿಯ ವಾದವು

ಸೋತು ಎಲ್ಲವೂ ತಮಗೆ ಅನುಕೂಲವಾದಲ್ಲಿ, ಆ ಇಬ್ಬರು ಮಾಲೀಕರುಗಳೂ ಆ ಚತುರವಾಗ್ಮಿಗಳಿಗೆ ಯುಕ್ತವಾದ ರೀತಿಯಲ್ಲಿ ತಮ್ಮ ಕೃತಜ್ಞತೆಯನ್ನು ತೋರಿಸುವುದಕ್ಕೆ ಸಿದ್ಧರಾಗಿದ್ದರು.

ಸಮಿತಿಯಿದ್ದ ಕೊಠಡಿಯಲ್ಲಿ ಗುಸು ಗುಸು ಪಿಸು ಪಿಸು ಮಾತಿಗೆ ಪ್ರಾರಂಭವಾಯಿತು. "ಅಗೋ! ನೋಡಿ, ಅಲ್ಲಿ ಬರುತ್ತಿದ್ದಾನೆ, ಆ ಸ್ಟೀಫೆನ್‌ಸನ್. ದೇಶವೆಲ್ಲಾ ಶಾಂತವಾಗಿರುವಾಗ ಅವನೇ ಅಲ್ಲವೆ ಈ ಹೊಸ ಗಲಾಟೆಯನ್ನು ಪ್ರಾರಂಭಿಸಿದವನು?" ಸಭೆಯಲ್ಲಿದ್ದ ಜನರು ಹೀಗೆ ಮಾತನಾಡುತ್ತಿದ್ದಾಗ ಸಮಿತಿಯ ಸೇವಕನು, ಹೆಚ್ಚು ಮರ್ಯಾದೆ ಮಾಡ ದೆಯೇ, ಆ ವಿಜ್ಞಾನಿಯನ್ನು ಅವನಿಗಾಗಿ ಗೊತ್ತುಮಾಡಿದ್ದ ಸ್ಥಳಕ್ಕೆ ಕರೆದುಕೊಂಡು ಹೋದನು. ಎಲ್ಲರ ದೃಷ್ಟಿಯೂ ಸ್ಟೀಫೆನ್‌ಸನ್ನನ ಮೇಲೆ ಬಿದ್ದಿತು. ಅವನು ಸರಳವಾದ, ಗಂಭೀರ ಪ್ರಕೃತಿಯ ಮನುಷ್ಯನಾಗಿದ್ದಂತೆ ಕಂಡಿತು. ಸ್ಟೀಫೆನ್‌ಸನ್ನನ ಜೊತೆಗೆ ಅವನ ಸ್ನೇಹಿತರುಗಳಲ್ಲಿ ಕೆಲವರು ಸಭೆಗೆ ಬಂದಿದ್ದರು. ಪಾರ್ಲಿಮೆಂಟ್ ಸಭೆಯ ಸದಸ್ಯರುಗಳಂಥ ವ್ಯವಹಾರ ಕುಶಲರ ಮಧ್ಯೆ ಸರಳಸ್ವಭಾವದ ವಿಜ್ಞಾನಿಯಾದ ತಮ್ಮ ಸ್ನೇಹಿತನ ಕೆಲಸ ಪೂರ್ತಿ ಕೆಟ್ಟುಹೋಗುವಂತಿದ್ದಿತೆಂದು ಆ ಗೆಳೆಯರು ಭಾವಿಸಿದರು. ಆ ಶಂಕೆಯು ಅವರನ್ನು ಬಹುವಾಗಿ ಬಾಧಿಸುತ್ತಿದ್ದಿತು.

ಸಮಿತಿಯ ಕೆಲಸವು ಕೆಲವು ವಾರಗಳು ನಡೆದರೂ ನಡೆಯಬಹು ದೆಂದು ಪ್ರಾರಂಭದಲ್ಲೇ ಸ್ಪಷ್ಟವಾಯಿತು. ಡಾರ್ಲಿಂಗ್‌ಟನ್ನಿನ 'ರೇವನ್ಸ್ ವರ್ತ್' ಗಣಿಗಳಲ್ಲಿ ಇಂಜಿನು ತಯಾರಿಸುವವನೂ, ಮ್ಯಾನೇಜರೂ ಆಗಿದ್ದ ಜಾರ್ಜ್ ಸ್ಟೀಫೆನ್‌ಸನ್ ಎಂಬ ಹೆಸರಿನ ಆ ವಿಜ್ಞಾನ ಸಂಶೋಧಕನು ತನ್ನ ಉದ್ದೇಶವೇನೆಂಬುದನ್ನು ಸೂಕ್ಷ್ಮವಾಗಿ ತಿಳಿಸಿ, ಮ್ಯಾಂಚೆಸ್ಟರಿನ 'ಬ್ರಿಡ್ಜ್‌ವಾಟರ್' ಗಣಿಗಳಿಂದ ಲಿವರ್‌ಪೂಲ್ ವರೆಗೆ, ತಾನು ತಯಾರಿ ಸಿದ್ದ 'ಲೋಕೊಮೊಟಿವ್' ಯಂತ್ರದ ಸಹಾಯದಿಂದ ಸಾಮಾನು ಗಳನ್ನೂ, ಸಾಧ್ಯವಾದಲ್ಲಿ ಮನುಷ್ಯರನ್ನೂ, ಸಾಗಿಸುವುದನ್ನು ಸುಲಭ ಮಾಡಿಕೊಡುವುದು ತನ್ನ ಉದ್ದೇಶವೆಂದು ಸ್ಪಷ್ಟಪಡಿಸಿದನು. ಅದರಿಂದ ವಾಹನ ಸೌಕರ್ಯದ ವಿಚಾರದಲ್ಲಿ ಒಂದು ಕ್ರಾಂತಿಯೇ ಆಗುವಂಥ ಅತ್ಯಂತ ಮುಖ್ಯವಾದ ವಿಚಾರವು ಪರ್ಯಾಲೋಚನೆಗೆ ಬಂದಿದ್ದ ಅಂಶವು

ಆಗ ಅಲ್ಲಿದ್ದವರಿಗೆ ದೃಢವಾಯಿತು. ಹೀಗೆ ಸಮಿತಿಯ ಮುಂದೆ ಪರಿಶೀಲನೆಗೆ ಬಂದಿದ್ದ ವಿಷಯವು ಮುಂದೆ ಪಾರ್ಲಿಮೆಂಟಿನ ಒಟ್ಟು ಸಭೆಯಲ್ಲಿ ಅನುಮೋದನೆ ಪಡೆದಲ್ಲಿ ಮಾತ್ರವೇ ಆ ವಿಜ್ಞಾನಿಯು ರೈಲ್ವೆಯನ್ನು ಹಾಕುವ ಯೋಜನೆಯನ್ನು ಕಾರ್ಯರೂಪಕ್ಕೆ ತರಬಹುದಾಗಿದ್ದಿತು. ಪಾರ್ಲಿಮೆಂಟಿಗೇನೋ ಇನ್ನೂ ಆ ವಿಚಾರವು ಚರ್ಚೆಗೆ ಬಂದಿರಲಿಲ್ಲ, ನಿಜ. ಆದರೆ ದೇಶದ ಕೈಗಾರಿಕೆ ಕ್ಷೇತ್ರಗಳಲ್ಲಿ ಆಗಲೇ ಆ ವಿಚಾರದ ಮೇಲೆ ದೊಡ್ಡ ಚರ್ಚೆಯು ಪ್ರಾರಂಭವಾಗಿದ್ದಿತು. 1824 ನೆಯ ಇಸವಿ ಅಕ್ಟೋಬರಿನಲ್ಲಿ ಮ್ಯಾಂಚೆಸ್ಟರ್ ಮತ್ತು ಲಿವರ್‌ಪೂಲ್ ನಗರಗಳ ದೊಡ್ಡ ದೊಡ್ಡ ವರ್ತಕರುಗಳು ಸೇರಿ ಬಹಿರಂಗವಾಗಿ ಕೊಟ್ಟ ಹೇಳಿಕೆಯಿಂದ ಆ ವಿಚಾರವಾಗಿ ತೀವ್ರ ವಾದವಿವಾದಗಳು ಪ್ರಾರಂಭವಾಗಿದ್ದುವು. ಸ್ಟೀವ್ಹನ್‌ಸನ್ನನ ಯೋಜನೆಯು ಫಲಕಾರಿಯಾದರೆ ಆ ಎರಡು ಊರುಗಳ ಮಧ್ಯೆ ನಾಲೆಯ ಮೂಲಕ ಪ್ರಯಾಣ ಮಾಡುವುದಕ್ಕೆ ಮೂವತ್ತಾರು ಘಂಟೆಗಳು ಹಿಡಿಯುತ್ತಿದ್ದುದಕ್ಕೆ ಬದಲಾಗಿ, ಪ್ರಯಾಣವು ನಾಲ್ಕು ಐದು ಘಂಟೆಗಳಲ್ಲೇ ಸಾಗುವುದೆಂದೂ, ಪ್ರಯಾಣದ ವೆಚ್ಚವೂ ಮೂರರಲ್ಲೊಂದು ಭಾಗ ತಗ್ಗುವುದೆಂದೂ ಆ ಹೇಳಿಕೆಯಲ್ಲಿ ತಿಳಿಸಲ್ಪಟ್ಟಿದ್ದಿತು. ರೈಲ್ವೆಯನ್ನು ಹಾಕುವುದಕ್ಕೆ ಚಂದಾ ಎತ್ತುವುದೂ ಪ್ರಾರಂಭವಾಗಿದ್ದಿತು. ಬಹಳ ಜನ ದೊಡ್ಡಮನುಷ್ಯರು ಚಂದಾ ಕೊಟ್ಟಿದ್ದರು. ಅವರಲ್ಲಿ ಕೆಲವರು ಸ್ಟೀವ್ಹನ್‌ಸನ್ನನನ್ನು ಕಂಡು ಅವನ ಲೋಕೊಮೊಟಿವ್ ಯಂತ್ರಗಳನ್ನು ಪರೀಕ್ಷಿಸಿ, ಅದರ ವೇಗದ ವಿಚಾರವಾಗಿ ಆಶ್ಚರ್ಯಕರವಾದ ವಿಷಯಗಳನ್ನು ವರದಿ ಮಾಡಿದ್ದರು.

ಇವೆಲ್ಲಾ ಸ್ಟೀವ್ಹನ್‌ಸನ್ನನಿಗೆ ಅನುಕೂಲವಾಗಿದ್ದವರು ಮಾಡಿದ್ದ ಕೆಲಸಗಳು. ಪ್ರತಿಕೂಲವಾದ ಗುಂಪಿನವರೂ ಇದ್ದರು. ಅವರೂ ಸುಮ್ಮನೆ ಕುಳಿತಿರಲಿಲ್ಲ. ರೈಲ್ವೆಯನ್ನು ಹಾಕಿದರೆ ನಾಲೆಯ ಮುಖಾಂತರ ಯಾರು ಪ್ರಯಾಣ ಮಾಡಬೇಕು ? ನಾಲೆಯ ಪ್ರಯಾಣ ಕುಸಿದುಬಿದ್ದು, ನಾಲೆಯ ಮಾಲೀಕರುಗಳಿಗೆ ಭಾರಿ ನಷ್ಟವೇ ಒದಗುವಂತಿದ್ದಿತು. ಆದುದರಿಂದ ಮಾಲೀಕರುಗಳು ಸ್ಥಳದ ರೈತರನ್ನೂ, ಜಮೀನ್ದಾರರುಗಳನ್ನೂ ಎತ್ತಿ ಕಟ್ಟಿದರು. ಪಾರ್ಲಿಮೆಂಟಿನಲ್ಲಿ ಸ್ಟೀವ್ಹನ್‌ಸನ್ನನ ಏರ್ಪಾಡಿನ ವಿಚಾರದ

ಚರ್ಚೆ ನಡೆಯುವ ಮುಂಚೆ, ರೈಲುಹಾಕುವ ಸ್ಥಳದ 'ಸರ್ವೆ' ನಡೆದಿದ್ದು, ವಿವರಗಳೆಲ್ಲಾ ಸಿದ್ಧವಾಗಬೇಕಾಗಿದ್ದಿತು. ಆ ಸಮಯದಲ್ಲಿ 'ಸರ್ವೆ' ನಡೆಯುವುದು ಸಾಧ್ಯವಾಗದೇ ಹೋಗುವುದಕ್ಕೆ ಏನೇನು ಅಡ್ಡಿ ಆತಂಕಗಳಾಗಬೇಕೋ ಎಲ್ಲಾ ಆಗುವಂತೆ ಆ ವಿರೋಧಿಗಳು ಸಂಚುಮಾಡಿದ್ದರು. ಲಾರ್ಡ್ ಡರ್ಬಿಯವರ ಆಳುಗಳು ಗುಂಪು ಕಟ್ಟಿಕೊಂಡು ಬಂದು, ಸ್ಟೀಫೆಸನ್ನನು ಆ ಸ್ಥಳಕ್ಕೆ ಬರುವುದಕ್ಕೆ ಆಗದಂತೆ ಮಾಡಿದರು. ಹೊಸ ಸಂಶೋಧನೆಯ ವಿಚಾರವಾಗಿ ಅರ್ಥವಿಲ್ಲದ ಸುಳ್ಳಿನ ಕಂತೆಗಳನ್ನು ಹರಡಿಸುವುದೂ ಪ್ರಾರಂಭವಾಯಿತು. ಅಲ್ಲದೆ ಸ್ಟೀಫೆಸನ್ನನೇ, ರೈಲು ಘಂಟೆಗೆ ಹದಿನಾರು ಮೈಲಿಗಳಷ್ಟು ವೇಗವಾಗಿ ಹೋಗುವುದೆಂದು ಹೇಳಿದುದು, ತೊಂದರೆಗೆ ಕಾರಣವಾಯಿತು. ಜನ ದಿಗಿಲು ಬಿದ್ದರು. 'ಅಬ್ಬಾ! ಘಂಟೆಗೆ ಹದಿನಾರು ಮೈಲಿಗಳು ಹೋಗುವುದೆಂದರೇನು ಸಾಮಾನ್ಯವೆ? ಅಷ್ಟು ಜೋರಾಗಿ ಹೋದರೆ ಮನುಷ್ಯನಿಗೆ ಉಸಿರು ಕಟ್ಟಿ ಹೋಗುವುದಿಲ್ಲವೆ?'—ಎಂದು ರೈತಾಪಿ ಜನರು ಯೋಚಿಸಿ ಕಳವಳಪಟ್ಟರು.

ಯಾವುದು ಹೇಗೆ ಇದ್ದರೂ, ರೈಲ್ವೆಯನ್ನು ಹಾಕುವ ವಿಷಯವು ಪಾರ್ಲಿಮೆಂಟಿನಲ್ಲಿ ಚರ್ಚೆಗೆ ಬರುವುದಕ್ಕಿಂತ ಮುಂಚಿತವಾಗಿಯೇ ಸ್ಥಳದ 'ಸರ್ವೆ' ಕೆಲಸವನ್ನು ಮುಗಿಸಲೇ ಬೇಕಾಗಿದ್ದಿತು. ನೂರಾರು ಮಂದಿ 'ಸರ್ವೇಯರು'ಗಳನ್ನು ಜೊತೆಗೆ ಸೇರಿಸಿಕೊಂಡು ಸ್ಟೀಫೆಸನ್ ಕೆಲಸ ನಡೆಯಿಸುತ್ತಲೇ ಇದ್ದನು. ನಾಲೆಯ ಮ್ಯಾನೇಜರಾದ ಕ್ಯಾಪ್ಟನ್ ಬ್ರಾಡ್‌ಷಾ ಸ್ಥಳದ ರೈತರುಗಳು ತೊಂದರೆ ಕೊಡುವಂತೆ ಅವರನ್ನು ಎತ್ತಿಕಟ್ಟುತ್ತಲೇ ಇದ್ದನು. ರೈತರುಗಳಿಗೂ ಸರ್ವೇಯರುಗಳಿಗೂ ಆಗಿಂದಾಗ್ಗೆ ಹೊಡೆದಾಟ ಬಡಿದಾಟ ನಡೆಯುತ್ತಲೇ ಇದ್ದಿತು. ಆದರೂ ಕೆಲಸ ಸಾಗಿತೇ ವಿನಾ ನಿಲ್ಲಲಿಲ್ಲ. ನಾಲೆಯು ಹರಿಯುವ ಪ್ರದೇಶದಲ್ಲಿ ಅನುಮತಿ ಇಲ್ಲದೆ ಪ್ರವೇಶಿಸುವವರನ್ನು ಕಂಡಕೂಡಲೇ ಗುಂಡಿಕ್ಕಿ ಕೊಲ್ಲಬಹುದೆಂದು ಬ್ರಾಡ್‌ಷಾ ಅಪ್ಪಣೆಕೊಟ್ಟಿದ್ದನು. ಅದಕ್ಕೆ ಪ್ರತಿಯಾಗಿ ಸ್ಟೀಫೆಸನ್ ಒಂದು ಉಪಾಯ ಹೂಡಿದನು. ಸರ್ವೇ ಕೆಲಸವು ನಡೆಯಬೇಕಾಗಿದ್ದ ಜಾಗದಿಂದ ಬಹಳ ದೂರದಲ್ಲಿ ಫೋಟಾ ಗುಂಡುಗಳನ್ನು ಹೊಡೆಯಿಸಿ, ಭಾರಿ ಶಬ್ದವನ್ನು ಮಾಡಿಸಿದನು. ಬ್ರಾಡ್‌ಷಾ ತನ್ನ ಜನರನ್ನೆಲ್ಲಾ ಆ ಕಡೆಗೇ ನುಗ್ಗಿಸಿದನು. ಆಗ ಸ್ಟೀಫೆಸನ್ ಶಾಂತನಾಗಿ ತನ್ನಷ್ಟಕ್ಕೆ ತಾನು ಬೇರೇ ಕಡೆ 'ಸರ್ವೆ'ಯನ್ನು ನಡೆಯಿಸುತ್ತಿದ್ದನು.

ಲಿವರ್ಪೂಲ್ ಮತ್ತು ಮ್ಯಾಂಚೆಸ್ಟರ್ ನಗರಗಳ ಮಧ್ಯೆ ಸಾಮಾನು ಸಾಗಾಟಕ್ಕೆ ಏನೇನು ತೊಡಕುಗಳಿದ್ದು, ಎಷ್ಟು ಕಾಲ ವಿಳಂಬವಾಗುತ್ತಿದ್ದಿತೆಂಬ ವಿಚಾರವಾಗಿ ಪಾರ್ಲಿಮೆಂಟಿನ ಸಮಿತಿಯ ಮುಂದೆ ಸಾಕ್ಷ್ಯ ಸಾಹಿತ್ಯವನ್ನು ಸಂಗ್ರಹಿಸುವುದಕ್ಕೆ ಒಂದು ತಿಂಗಳು ಹಿಡಿಯಿತು. ಆಗಿನ ಕಾಲದ ಅವಶ್ಯಕತೆಗಳಿಗೆ ನಾಲೆಯಿಂದ ಏನೇನೂ ಸಹಾಯವಿಲ್ಲವೆಂಬುದನ್ನು ಶೀಘ್ರವಾಗಿಯೇ ತೋರಿಸಿಕೊಟ್ಟಂತಾಯಿತು. ಇವೆಲ್ಲಾ ನಡೆಯುತ್ತಿದ್ದಾಗ ವಿರೋಧ ಪಕ್ಷದವರು ರೈಲ್ವೆಗೆ ಪ್ರತಿಕೂಲವಾಗುವಂತಹ ಲೇಖನಗಳನ್ನು ಪ್ರಕಟಿಸಿ ಹಸ್ತಪತ್ರಿಕೆಗಳನ್ನು ಹಂಚಿದರು. ರೈಲ್ವೆ ಹಾಕಬೇಕಾಗಿದ್ದ ಜಮೀನುಗಳ ಮಾಲೀಕರುಗಳ ಪರವಾಗಿ ಪುರೋಹಿತರುಗಳು ಪ್ರಾರ್ಥನೆ ನಡೆಯಿಸಿ, ರೈಲ್ವೆ ಬರದಿರಲೆಂದು ದೇವರನ್ನು ಬೇಡಿದರು. ನಾಲೆಯ ಮಾಲೀಕರುಗಳಿಂದ ಸಂಬಳ ಪಡೆದ ಲೇಖಕರು ಹಲವು ಕಟ್ಟುಕಥೆಗಳನ್ನು ಹೆಣೆದರು. ಆ ಕಥೆಗಳ ಒಕ್ಕಣೆಯನ್ನಾದರೂ ಏನೆಂದು ಹೇಳೋಣ! 'ರೇಲ್ವೆ ಗಾಡಿಗಳು ಜೋರಾಗಿ ಓಡುತ್ತಿದ್ದರೆ ಹಸುಗಳು ಪಕ್ಕದಲ್ಲಿ ಹುಲ್ಲು ಮೇವನ್ನು ಬಿಟ್ಟುಬಿಡುತ್ತವೆ. ಅವು ಹುಲ್ಲನ್ನು ಮೇಯದಿದ್ದರೆ ಹಾಲು ಕೊಡುವುದು ಹೇಗೆ ? ಅಕ್ಕಪಕ್ಕದ ಪ್ರದೇಶಗಳಲ್ಲಿ ಕೋಳಿಗಳು ಮೊಟ್ಟೆಗಳನ್ನೇ ಇಡುವುದಿಲ್ಲ ; ರೈಲ್ವೆಯಿಂದ ಹೊರಡುವ ಕಶ್ಮಲವಾದ ಗಾಳಿಯಿಂದ ಪಕ್ಷಿಗಳು ಸತ್ತು ಹೋಗುತ್ತವೆ ; ಅಂದವಾದ ಹಕ್ಕಿಗಳನ್ನೂ ಪ್ರಾಣಿಗಳನ್ನೂ ಸಾಕುವುದು ಕಷ್ಟವಾಗಿಬಿಡುತ್ತದೆ—ಏಕೆಂದರೆ ರೈಲಿನ ಕೂಗಿಗೆ ಅವು ಹೆದರಿ ಪ್ರಾಣ ಬಿಡುತ್ತವೆ ; 'ಇಂಜಿನು'ಗಳಿಂದ ಹಾರುವ ಕಿಡಿಗಳು ಅಕ್ಕಪಕ್ಕದ ಮನೆಗಳ ಮೇಲೆ ಬಿದ್ದರೆ ಮನೆಗಳು ಹತ್ತಿಕೊಂಡುಬಿಡುತ್ತವೆ ; ಹೊಗೆ ಮಿಶ್ರವಾದ ಗಾಳಿಯನ್ನು ಸೇವಿಸಿ ಜನಗಳೆಲ್ಲಾ ಪ್ರಾಣಬಿಡುತ್ತಾರೆ ; ರೈಲ್ವೆ ಬಂದಮೇಲೆ ಕುದುರೆ ಗಾಡಿಗಳೇಕೆ ? ಅಂದಮೇಲೆ, ಕುದುರೆಗಳಿಗೆ ಕೆಲಸವಿಲ್ಲದೆ ಹೋಗಿ ಅವೂ ಸತ್ತುಹೋಗುತ್ತವೆ. ಕುದುರೆಗಳೇ ಇಲ್ಲದೆ ಹೋದಮೇಲೆ, ಹುರುಳಿ ಮತ್ತು ಹುಲ್ಲು—ಇವುಗಳ ಬೆಲೆ ಇಳಿದುಹೋಗಿ ಅವುಗಳಿಗೆ ಗಿರಾಕಿಯೂ ಇಲ್ಲದೆ ಹೋಗುತ್ತದೆ. ಆ ವಸ್ತುಗಳನ್ನು ಮಾರುವವರು ದಿವಾಳಿಯಾಗುವುದೇ ಖಂಡಿತ'.—ಇಂಥ ಅನೇಕ ವಿಷಯುಗಳನ್ನು ತಿಳಿಸುವಂಥ ಹಸ್ತಪತ್ರಿಕೆಗಳನ್ನು ವಿರೋಧ ಪಕ್ಷದವರು ಜನರಲ್ಲಿ ಹಂಚಿದರು.

ಐದು ವಾರಗಳ ಕಾಲ ವಾದ ವಿವಾದಗಳು ನಡೆದುವು. ಅನಂತರ, ಸಮಿತಿಯವರು ಸ್ಟೀವ್ಹೆನ್ಸನ್ನನ್ನೇ ಬಂದು ವಿವರಣೆ ಕೊಡಬೇಕೆಂದು ತಿಳಿಸಿದರು. ಸ್ಟೀವ್ಹೆನ್ಸನ್ ಆ ಆಜ್ಞೆಯಂತೆ ಹಾಜರಾದನು. ಸ್ಟೀವ್ಹೆನ್ಸನ್ ಎಂದೂ ಅಂಥ ಸಭೆಯ ಮುಂದೆ ನಿಂತವನೇ ಅಲ್ಲ. ಎದುರು ಪಕ್ಷದವರು ಪ್ರಶ್ನೆಗಳ ಸುರಿಮಳೆಯನ್ನು ಕರೆಯದೆ ಬಿಡುವುದಿಲ್ಲವೆಂದು ಅವನಿಗೆ ಸ್ಪಷ್ಟವಾಗಿದ್ದಿತು. ಆದರೆ ಆ ಸಮಯದಲ್ಲಿ ತಾನು ಸರಿಯಾಗಿ ಉತ್ತರ ಕೊಡದಿದ್ದರೆ, ನಾಲೆಯ ಮಾಲೀಕರುಗಳೇ ಗೆದ್ದುಬಿಡುತ್ತಾರೆ—ಎಂಬುದೂ ಗೊತ್ತಾಗಿದ್ದಿತು. ಅಂತು ಪಾಟೀಸವಾಲು ಪ್ರಾರಂಭವಾಯಿತು. ಅಜ್ಞಾನವು ವಿಜ್ಞಾನವನ್ನು ಮೂದಲಿಸಿ ಪ್ರಶ್ನಿಸುವ ದೃಶ್ಯ ! ಅದು ನಡೆದು ಬಹಳ ಕಾಲವಾದ ಮೇಲೆ, ಒಮ್ಮೆ ಆ ಸಂದರ್ಭದ ವಿಚಾರವಾಗಿ ಮಾತನಾಡುತ್ತ ಸ್ಟೀವ್ಹೆನ್ಸನ್ನನು, ಪಾಟೀಸವಾಲು ಪ್ರಾರಂಭವಾದಾಗ ತನಗೆ ಅಲ್ಲಿಂದ ಓಡಿಹೋಗಬೇಕೆನ್ನಿಸಿತೆಂದು ಹೇಳಿದನು.

ಸ್ಟೀವ್ಹೆನ್ಸನ್ ಮಾತಿನಲ್ಲಿ ಹೆಚ್ಚು ಜಾಣನಾಗಿರಲಿಲ್ಲ. ಅವನು ಪ್ರಯೋಗಿಸಿದ ಪದಗಳು ಅವನಿಗೇ ತೃಪ್ತಿಕರವಾಗಿರಲಿಲ್ಲ. ಇನ್ನು ಸಮಿತಿಗೆ ತೃಪ್ತಿಯನ್ನುಂಟುಮಾಡುವುವೆ ? ಸಭೆಯ ಮತ್ತು ಸಮ್ಮೇಳನಗಳ ಕೆಲಸಗಳಲ್ಲಿ ನುರಿತ ಎಂಟು ಮಂದಿ ಲಾಯರುಗಳು ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಹಾಕುತ್ತಿದ್ದರು. ಎಂಥ ನಿಜವಾದ ವಿಷಯವನ್ನು ಹೇಳತಕ್ಕವನಿಗೂ ತಾನು ಹೇಳುವುದು 'ನಿಜವೋ ಸುಳ್ಳೋ' ಎಂಬ ಭ್ರಾಂತಿ ಹುಟ್ಟಿಸುವಂಥ ಪ್ರಶ್ನೆಗಳು ! ಅವನು ವಿದೇಶೀಯನಿರಬೇಕೆಂದೂ, ಹುಚ್ಚನಿರಬಹುದೆಂದೂ ಸಹ ಅವರು ಸಮಿತಿಗೆ ಸೂಚಿಸಿದರು. ಆದರೂ—ಸ್ಟೀವ್ಹೆನ್ಸನ್ ಜಗ್ಗಲಿಲ್ಲ. ಒಂದೊಂದೇ ವಾಕ್ಯವನ್ನು ಜೋಡಿಸಿಕೊಂಡು ಹೇಳುತ್ತಾ, ಎದುರು ಪಕ್ಷದವರ ಹುಸಿನಗು, ಕೊಂಕು ನುಡಿಗಳು, ಅಂಗ ಚೇಷ್ಟೆಗಳು—ಇವುಗಳಲ್ಲಿ ಯಾವುದನ್ನೂ ಗಮನಿಸದೆ, ತನ್ನ ಮನಸ್ಸಿಗೆ ಖಚಿತವಾಗಿದ್ದ ಮುಖ್ಯ ವಿಷಯವನ್ನು ಸಮಿತಿಯವರಿಗೆ ತಿಳಿಸಲು ಅವಕಾಶವನ್ನು ಪಡೆದುಕೊಂಡನು.

ಸಮಿತಿಯ ಕಾರ್ಯಕಲಾಪ ನಡೆಯುತ್ತಿದ್ದಾಗ ಒಂದು ದಿನ ಸ್ಟೀವ್ಹೆನ್ಸನ್ನನು ತನ್ನ ಜೀವನ ವೃತ್ತಾಂತ, 'ಲೋಕೊಮೊಟಿವ್'ಗಳಲ್ಲಿ ತನ್ನ ಅನುಭವ—ಇವುಗಳನ್ನು ತಿಳಿಸಬೇಕೆಂದು ಒಬ್ಬ ಸದಸ್ಯರು ಕೇಳಿದರು. ಸ್ಟೀವ್ಹೆನ್ಸನ್ ಒಪ್ಪಿ, ಹೇಳಲಾರಂಭಿಸಿದನು :—

"ನಾರ್ದಂಬರ್ಲೆಂಡ್ ಪ್ರಾಂತದ 'ವೈಲಂ—ಆನ್—ಟೈನ್' ಎಂಬಲ್ಲಿ 1781 ರಲ್ಲಿ ನಾನು ಹುಟ್ಟಿದುದು. ನಮ್ಮ ತಂದೆ ಗಣಿಯಲ್ಲಿ ಕೆಲಸಕ್ಕಿದ್ದರು. ಎಲ್ಲರೂ ಅವರನ್ನು 'ಬಾಬ್' ಎಂದು ಕರೆಯುತ್ತಿದ್ದರು. ನಾವು ಐದು ಮಂದಿ ಮಕ್ಕಳು. ನಮ್ಮ ಮನೆಯ ಮುಂದೆ ಸದಾ ಗಾಡಿಗಳೂ, ಕುದುರೆ ಸವಾರರೂ, ರೈತರೂ ಎಡಬಿಡದೆ ತಿರುಗಾಡುತ್ತಿದ್ದು ರಸ್ತೆಯ ಬಳಿ ನಮ್ಮ ಮನೆಯಿದ್ದಿತು. ಚಿಕ್ಕವನಾಗಿದ್ದಾಗ ಅವನ್ನೆಲ್ಲಾ ನೋಡಿದರೆ ನನಗೆ ಬಹಳ ಆನಂದವಾಗುತ್ತಿದ್ದಿತು. ಆದರೆ ಎಲ್ಲಕ್ಕಿಂತ, ಕುದುರೆಗಳು ಎಳೆಯುತ್ತಿದ್ದ ಒಂದು 'ರೈಲ'ನ್ನು ಕಲ್ಲಿದ್ದಲನ್ನು ಸಾಗಿಸುವುದಕ್ಕೆ ಉಪಯೋಗಿಸುತ್ತಿದ್ದುದು, ಬಹಳ ಸ್ವಾರಸ್ಯಕರವಾಗಿದ್ದಿತು. ನೆರೆಮನೆಯವರ ಹಸುಗಳನ್ನೂ, ಬಾತುಗಳನ್ನೂ ನಾನು ನೋಡಿಕೊಳ್ಳುವ ಕೆಲಸಕ್ಕೆ ನೇಮಕವಾಗಿದ್ದೆನು. ಅವು 'ರೈಲು ಲೈನಿ'ನ ಮೇಲೆಲ್ಲಿ ಹೋಗಿಬಿಡುವುವೋ—ಎಂದು ನಾನು ಬಹಳ ಜಾಗರೂಕನಾಗಿರುತ್ತಿದ್ದೆನು. ಆ ಕೆಲಸಕ್ಕೆ ನನಗೆ ದಿನಕ್ಕೆ ಎರಡಾಣೆ ಕೂಲಿ ಸಿಗುತ್ತಿದ್ದಿತು. ನನ್ನ ಓದಿನ ವಿಚಾರ ಹೇಳಲೆ? ನಾನು ಸ್ಕೂಲಿಗೇ ಹೋದವನಲ್ಲ. ತಂದೆತಾಯಿಗಳಿಗೆ ನನ್ನನ್ನು ಪಾಠಶಾಲೆಗೆ ಸೇರಿಸುವಷ್ಟು ಅನುಕೂಲ ಇರಲಿಲ್ಲ. ಒಂಬತ್ತು ವರ್ಷಕ್ಕೇ ನಾನು ಗಣಿಯಲ್ಲಿ ಕೂಲಿಯಾಳಾಗಿ ಸೇರಿದೆ. ಹದಿನೇಳು ವರ್ಷ ವಯಸ್ಸಾಗುವ ವೇಳೆಗೆ, ಗಣಿಯಲ್ಲಿ 'ಇಂಜಿನ'ನ್ನು ನೋಡಿಕೊಳ್ಳುವ ಕೆಲಸಕ್ಕೆ ನೇಮಕವಾದೆ. ಹದಿನೆಂಟನೆಯ ವಯಸ್ಸಾದಾಗ, ಸಂಜೆಯ ಶಾಲೆಗೆ ಸೇರಿದೆ. ಏಕೆಂದರೆ ಆ ವಯಸ್ಸಿನಲ್ಲೂ ನನಗೆ ಓದುವುದಕ್ಕೂ ಬರೆಯುವುದಕ್ಕೂ ಬರುತ್ತಿರಲಿಲ್ಲ."

ಸಭೆಯಲ್ಲಿ ಯಾರೋ ನಕ್ಕರು. ಸ್ಟೀವರ್ಸನ್ ಅದರಿಂದೇನೂ ನೊಂದುಕೊಳ್ಳದೆ, ತನ್ನ ವಿಚಾರವನ್ನು ಮುಂದುವರಿಸಿದನು: "ತಾವು ನಗಬಹುದು, ಸ್ವಾಮಿ. ಆದರೆ ನಿಜವಾಗಿಯೂ ನನಗೆ ಆಗ ಓದುವುದಕ್ಕೂ, ಬರೆಯುವುದಕ್ಕೂ ಬರುತ್ತಿರಲಿಲ್ಲ. ಆದರೆ, ಅನಂತರ ಓದು ಬರೆಹ ಮಾತ್ರವಲ್ಲದೆ, ಲೆಕ್ಕಗಳನ್ನೂ ಕಲಿತೆ. ಹತ್ತೊಂಭತ್ತನೆಯ ವಯಸ್ಸಿನ ವೇಳೆಗೆ ರುಜು ಮಾಡುವಷ್ಟು ಮಟ್ಟಿಗೆ ಅಕ್ಷರ ಕಲಿತೆ. ಆಗ ಹೆಸರು ರುಜು ಮಾಡುವುದಕ್ಕೆ ತಿಳಿದಿದ್ದುದೇ ನನಗೊಂದು ಹೆಮ್ಮೆ. ಇಪ್ಪತ್ತೊಂದು ವರ್ಷವಾದಾಗ ಮದುವೆಯಾದೆ. ನನ್ನ ಕೆಲಸದಲ್ಲೂ ನನಗೆ ಹೆಸರು ಬಂದಿತು. ಆ ಜಿಲ್ಲೆಯ

ಗಣಿಗಳಲ್ಲೆಲ್ಲಾ ಪಂಪುಗಳನ್ನೂ, ಗಣಿಗಳ ' ರೈಲು ' ಗಾಡಿಗಳನ್ನೂ ಸರಿಪಡಿಸುವುದಕ್ಕೆ ನನ್ನನ್ನೇ ಕರೆಯುತ್ತಿದ್ದರು. ಗೌರವವಾಗಿ ನನ್ನನ್ನು ' ಇಂಜನ್ ವೈದ್ಯರು ' ಎಂದು ಕರೆಯುತ್ತಿದ್ದರು. ಕೆಟ್ಟದ್ದ ಅನೇಕ ಯಂತ್ರಗಳನ್ನು ಸರಿಪಡಿಸಿ, ಆ ಮೂಲಕ ಅವುಗಳ ಮಾಲೀಕರಿಗೆ ಬಹಳ ಹಣ ಉಳಿತಾಯವಾಗುವಂತೆ ಮಾಡಿದೆ. ಆ ಕಾಲದಲ್ಲಿ ಪ್ರತಿಯೊಂದು ಹೊಸ ವಿಷಯವನ್ನೂ ಮನಸ್ಸಿಟ್ಟು ಕಲಿಯುತ್ತಿದ್ದೆ. ನನ್ನ ಹೆಂಡತಿಯೂ, ತಾನು ಬದುಕಿದ್ದಷ್ಟು ಕಾಲವೂ, ಅದೇ ರೀತಿ ಎಲ್ಲಾ ವಿಚಾರಗಳನ್ನೂ ಮನಸ್ಸುಕೊಟ್ಟು ಕಲಿಯುತ್ತಿದ್ದಳು. ಆಕೆಯ ಅನಂತರ ನನ್ನ ಮಗ ರಾಬರ್ಟ್ ಯಂತ್ರದ ಕೆಲಸಗಳನ್ನು ಕಲಿತು, ನನಗೆ ಸಹಾಯಕನಾದ. ನಾನೆಷ್ಟು ಮುಂದುವರಿಯಬೇಕೆಂದು ಆಶೋತ್ತರವಿಟ್ಟುಕೊಂಡಿದ್ದೆನೋ ಅದಕ್ಕಿಂತ ಹೆಚ್ಚಾಗಿ ನನಗೆ ನನ್ನ ಮಗನ ವಿಚಾರದಲ್ಲಿ ಆಶೋತ್ತರವಿದ್ದಿತು. ದೇವರು ನನ್ನ ಆಶೆಯನ್ನು ನೆರವೇರಿಸಿದ್ದಾನೆ. ನನ್ನ ಮಗನು ಈಗ ಅಮೇರಿಕಾದಲ್ಲಿದ್ದಾನೆ. ದೊಡ್ಡ ದೊಡ್ಡ ಇಂಜಿನಿಯರುಗಳೂ ತಲೆದೂಗುವಂಥ ಭಾರಿ ಸೇತುವೆಗಳನ್ನೂ, ಅಣೆಕಟ್ಟುಗಳನ್ನೂ ಕಟ್ಟಿದ್ದಾನೆ."

ಒಂದು ಕ್ಷಣ ತಡೆದು, ಸ್ಟೀಫೆನ್ಸನ್ ಮುಂದುವರಿಸಿದನು : " ಅನಂತರ ಲಾರ್ಡ್ ರೇವನ್ಸ್‌ವರ್ತರ ಕಿಲ್ಲಿಂಗ್‌ವರ್ತ್ ಗಣಿಗಳಲ್ಲಿ ನಾನು 'ಫೋರ್‌ಮನ್' ಹುದ್ದೆಗೆ ನೇಮಕವಾದೆ. ರೇವನ್ಸ್‌ವರ್ತ್‌ರ ಸಹಾನುಭೂತಿ, ಸಹಾಯಗಳಿಗೆ ನಾನು ಚಿರಋಣಿ. ನನ್ನ ಯೋಜನೆಗಳು ಕಟ್ಟು ಕಥೆಗಳಲ್ಲವೆಂದೂ, ವಾಹನ ಸೌಕರ್ಯವನ್ನು ಹೆಚ್ಚಿಸುವುದಕ್ಕೆ ವಾಸ್ತವವಾಗಿಯೂ ಸಹಕಾರಿಗಳೆಂದೂ ಅವರು ಬಹು ವರ್ಷಗಳ ಹಿಂದೆಯೇ ಕಂಡಿದ್ದರು "

"ನಿಮ್ಮ ಯೋಜನೆಗಳ ವಿಚಾರವಾಗಿ ಲಾರ್ಡ್ ರೇವನ್ಸ್‌ವರ್ತರಿಗೆ ನೀವು ಹೇಳಿದ್ದೇನು ? " ಎಂದು ಒಬ್ಬ ಸದಸ್ಯರು ಕೇಳಿದರು.

ಸ್ಟೀಫೆನ್ಸನ್ : "ನಾನು ಹಬೆ ಇಂಜಿನುಗಳು, ಟ್ರಕ್ಕುಗಳು, ರೈಲ್ವೇ ಮಾರ್ಗಗಳು, 'ಫ್ರಿಕ್ಷನ್', 'ಗ್ರಾವಿಟಿ', ಮೊದಲಾದ ವಿಚಾರಗಳನ್ನು ವ್ಯಾಸಂಗ ಮಾಡಿ ನೋಡಿದ್ದರ ಆಧಾರದ ಮೇಲೆ, ಮುಂದೆ ವಾಹನಗಳು 'ಲೋಕೊಮೊಟಿವ್' ಯಂತ್ರಗಳ ಸಹಾಯದಿಂದ ಓಡುವುವೆಂದೂ, ಅವುಗಳನ್ನು ಕಬ್ಬಿಣದ ಪಟ್ಟಿಗಳ ಮೇಲೆ ಓಡಿಸಬೇಕಾಗುವುದೆಂದೂ ಅವರಿಗೆ ಹೇಳಿದೆ.

ಸ್ವಲ್ಪಕಾಲ ಕಳೆಯುವುದರೊಳಗಾಗಿಯೇ ರಸ್ತೆಗಳಲ್ಲಿ ಬೇರೆ ಗಾಡಿಗಳೇ ಇರುವುದಿಲ್ಲವೆಂದೂ ಪ್ರತಿಯೊಂದು ದೇಶದಲ್ಲೂ ರೈಲು ಗಾಡಿಗಳೇ ಓಡಾಡುತ್ತವೆಯೆಂದೂ ಸಹ ಹೇಳಿದೆ."

ಪುನಃ ಕೆಲವರು ತಿರಸ್ಕಾರದಿಂದ ನಕ್ಕರು. ಒಬ್ಬ ಸದಸ್ಯನು: "ಸರಿ ಸರಿ! ಈ ಕಟ್ಟುಕಥೆಗಳೆಲ್ಲಾ ಇರಲಿ. ಇನ್ನು ಹೆಚ್ಚು ವಿಚಾರಣೆಯೂ ಅಗತ್ಯವಿಲ್ಲ" ಎಂದನು. ಅಲ್ಲದೆ: "ಲೋಕೊಮೊಟಿವ್‌ಗಳೂ ಸಹ ಇಂಜಿನು ತಾನೆ? ಅದರಲ್ಲಿ ಬೆಂಕಿ ಇದ್ದೇ ಇರುತ್ತದೆ. ಗಾಡಿಯು ಓಡುತ್ತಿರುವಾಗ ಮಳೆ ಬಂದರೆ ಬೆಂಕಿ ಆರಿಹೋಗುತ್ತದೆ. ಗಾಡಿಗೆಲ್ಲಾ ಬುರುಕಿ ಹೊದಿಸುವುದು ಸಾಧ್ಯವೆ? ಹೊದಿಸಿದರೂ, ಗಾಳಿಯ ಏಟಿಗೆ ಬಟ್ಟೆ ಹಾರಿ ಹೋಗುತ್ತದೆ. ಗಾಳಿ ಬಿರುಸಾದರೆ, ಬೆಂಕಿಗೆ ಬಹಳ ಕಾವುಹತ್ತಿ, 'ಬಾಯಿಲರ್' ಯಂತ್ರ ಒಡೆದು, ಚೂರುಚೂರಾಗಿ........"

ಸದಸ್ಯರ ಮಾತು ಮುಗಿದಿರಲಿಲ್ಲ. ಸ್ಟೀವೆನ್‌ಸನ್ನನಿಗೆ ಅವರ ಮಾತಿನಿಂದ ಬಹಳ ನಗು ಬಂದಿತು. "ಕ್ಷಮಿಸಿ ಸ್ವಾಮಿ! ನಾನು ಈ ಯಂತ್ರಗಳನ್ನು ಇಪ್ಪತ್ತು ವರ್ಷಗಳಿಂದ ತಯಾರಿಸುತ್ತ ಬಂದಿದ್ದೇನೆ. ಒಂದೇ ಒಂದು ಸಲ ಕೂಡ ಮಳೆಯಿಂದ ಬೆಂಕಿ ಆರಲಿಲ್ಲ. ಒಂದು ಸಲವಾದರೂ ಗಾಳಿಯಿಂದ 'ಬಾಯಿಲರ್' ಒಡೆಯಲಿಲ್ಲ," ಎಂದು ಹೇಳಿ ಜೇಬಿನಿಂದ ಒಂದು ಸಣ್ಣ 'ಡೈರಿ'ಯನ್ನೆಳೆದು ತೋರಿಸಿ, ಈ ರೀತಿ ಹೇಳಿದನು: "ಇದರಲ್ಲಿ ರೈಲುಗಾಡಿಯ ವಿಚಾರವಾಗಿ ಬರಬಹುದಾದ ಇನ್ನೂ ಅನೇಕ ಆಕ್ಷೇಪಣೆಗಳನ್ನೂ, ಅವುಗಳಿಗೆ ಸಮಾಧಾನಗಳನ್ನೂ ಬರೆದಿಟ್ಟಿದ್ದೇನೆ. ಇದನ್ನು ನಾನೇ ತಯಾರಿಸಿದೆ. ಇದರಲ್ಲಿ ಹೇಳಿರುವ ವಿಷಯಗಳಲ್ಲಿ ಮತ್ತು ಲೆಕ್ಕಾಚಾರಗಳಲ್ಲಿ ಅಸಾಧ್ಯವಾದುವೇನೂ ಇಲ್ಲ. ಹೇಳಿರುವುದನ್ನೆಲ್ಲಾ ಸಾಧ್ಯವೆಂದೇ ತೋರಿಸಿಕೊಟ್ಟಿದ್ದೇನೆ. ನಾನು 'ಲೋಕೊಮೊಟಿವ್'ಗಳಿಗೆ ಸಂಬಂಧಿಸಿದ ಪ್ರಯೋಗಗಳನ್ನು ಮೊದಲು ನಡೆಯಿಸಿದುದು 1806 ರಲ್ಲಿ. ಆ ಪ್ರಯೋಗಗಳನ್ನು ಕಲ್ಲಿದ್ದಲು ಗಣಿಗಳಲ್ಲಿ ನಡೆಯಿಸಿದೆನು. ಏಳು ವರ್ಷಗಳ ಅನಂತರ, 'ವಿಲಿಯಂ ಹ್ಯಾಡ್ಲಿ'ಯು ಇಂಥ ಯಂತ್ರಗಳನ್ನು ತಯಾರಿಸಿದನು. ಅವುಗಳನ್ನು ನಡೆಯಿಸಿದ ಪ್ರದೇಶದ ಪಕ್ಕದ ಹೊಲದಲ್ಲಿ ನಾನು ಹಸುಗಳನ್ನೂ, ಬಾತುಕೋಳಿಗಳನ್ನೂ ನೋಡಿಕೊಳ್ಳುತ್ತಿದ್ದೆನು. ಆ 'ಲೋಕೊಮೊಟಿವ್' ಬಹಳ ಒಳ್ಳೆಯ

ಯಂತ್ರವಾಗಿದ್ದಿತು. ಆಗ ನಾನು ಲಾರ್ಡ್ ರೇವನ್ಸ್‌ವರ್ತ್‌ರ ಬಳಿಗೆ ಹೋಗಿ ಧನಸಹಾಯ ಬೇಕೆಂದು ಕೇಳಿದೆನು. ದೊಡ್ಡದೊಂದು ಲೋಕೊಮೊಟಿವನ್ನು ತಯಾರಿಸುವುದಕ್ಕೆ ನನಗೆ ಹಣ ಬೇಕಾಗಿದ್ದಿತು. ಅದನ್ನು ಕಟ್ಟಿದ ಮೇಲೆ ಅದಕ್ಕೆ 'ಪ್ರಯಾಣದ ವಾಹನ'ವೆಂದು ಹೆಸರಿಟ್ಟೆವು. 30 ಟನ್ನುಗಳ ಕಲ್ಲಿದ್ದಲನ್ನು ಘಂಟೆಗೆ ಸುಮಾರು ನಾಲ್ಕು ಮೈಲಿ ವೇಗದಲ್ಲಿ ಅದರಲ್ಲಿ ಸಾಗಿಸಬಹುದಾಗಿದ್ದಿತು. 1815 ರಲ್ಲಿ ನಾನು ನನ್ನ ಎರಡನೆಯ ಯಂತ್ರವನ್ನು ತಯಾರಿಸಿದೆನು. ಅದು ಕುದುರೆಗಳಿಗಿಂತ ವೇಗವಾಗಿ ಓಡುತ್ತಿದ್ದಿತು. ಅದಕ್ಕೆ ತಗಲುತ್ತಿದ್ದ ವೆಚ್ಚವೂ ಕುದುರೆಗಳಿಗೆ ತಗಲುತ್ತಿದ್ದ ವೆಚ್ಚಕ್ಕಿಂತ ಕಡಮೆಯಾಗಿದ್ದಿತು. ಅದಾದ ಒಂದು ವರ್ಷದ ಮೇಲೆ ಮೂರನೆಯ ಯಂತ್ರವನ್ನು ತಯಾರಿಸಿದೆನು. ಅದರಲ್ಲಿ ಯಂತ್ರದ ಹೊರಗಡೆಯಿಂದ ಸುತ್ತಿಬರುವುದಾಗಿದ್ದು, ಚಕ್ರಗಳೆರಡಕ್ಕೂ ಸೇರಿದ್ದ ಸರಳನ್ನು ಜೋಡಿಸಿದೆ. ಅಂತು ಈ ವರೆಗೆ ಹದಿನಾರು ಬಗೆಯ ಲೋಕೊಮೊಟಿವ್ ಯಂತ್ರಗಳನ್ನು ತಯಾರಿಸಿದ್ದೇನೆ. ಕಳೆದ ಎರಡು ವರ್ಷಗಳಿಂದ ಸ್ವಂತವಾದ 'ಲೋಕೊಮೊಟಿವ್' ಕಾರ್ಖಾನೆಯನ್ನು ಇಟ್ಟಿದ್ದೇನೆ. ಅಲ್ಲಿ ಈಗಾಗಲೇ ಮೂರು ಇಂಜಿನ್‌ಗಳನ್ನು ತಯಾರಿಸಿದ್ದೇನೆ. ಇಂಗ್ಲೆಂಡಿನ ಮೊದಲನೆಯ ಸಾಲಿನ ರೈಲಿಗೆ ಅವುಗಳನ್ನು ಉಪಯೋಗಿಸಬೇಕಾಗಿದೆ. ಇನ್ನು ಕೆಲವು ತಿಂಗಳುಗಳಲ್ಲಿ ರೈಲ್ವೆಯೂ ಬಂದು ಬಿಡುತ್ತದೆ. ಸ್ಟಾಕ್‌ಟನ್ನಿನಿಂದ ಡಾರ್ಲಿಂಗ್ಟನ್ ವರಗೆ ಈ ರೈಲನ್ನು ಹಾಕುತ್ತೇವೆ. ಕಲ್ಲಿದ್ದಲನ್ನು ಸಾಗಿಸುವುದಕ್ಕೆ ಮುಖ್ಯವಾಗಿ ಈ 'ಲೈನು' ಉಪಯೋಗಕರವಾಗುತ್ತದೆ. ಅದರ ಪ್ರಾರಂಭೋತ್ಸವಕ್ಕೆ ನೀವೆಲ್ಲಾ ಬರುವುದಾದರೆ ಬಹಳ ಸಂತೋಷ."

ವಿಚಾರಣೆಯ ಸಮಯದಲ್ಲಿ ಸಾಕ್ಷ್ಯವನ್ನು ಹೇಳುವುದಕ್ಕಾಗಿ ಸ್ಟೀಫನ್ಸನ್ ಡಾರ್ಲಿಂಗ್ಟನ್ನಿನ ಕಲ್ಲಿದ್ದಲು ಗಣಿಗಳ ಜನರಲ್ ಮ್ಯಾನೇಜರಾದ ವಿಲ್ ಪೀಸ್ ಎಂಬುವರನ್ನು ಕರೆದುಕೊಂಡು ಬಂದಿದ್ದನು. ಅವರು ತಮ್ಮ ಸಾಕ್ಷ್ಯದಲ್ಲಿ ಸ್ಟೀಫನ್ಸನ್ನನ ಸಂಶೋಧನೆಯಲ್ಲಿ ಪೂರ್ಣ ನಂಬಿಕೆಯನ್ನು ವ್ಯಕ್ತಪಡಿಸಿದರು.

ಎರಡನೆಯ ದಿನದ ವಿಚಾರಣೆಯಲ್ಲಿ ಮ್ಯಾಂಚೆಸ್ಟರಿನಿಂದ ಲಿವರ್‌ಪೂಲಿಗೆ ರೈಲ್ವೆ ಏಕೆ ಬೇಕೆಂದು ಸಮಿತಿಯವರು ಸ್ಟೀಫನ್ಸನ್ನನನ್ನು ಕೇಳಿದರು.

ಆ ವಿಚಾರದ ಮೇಲೆ ಹತ್ತು ಹನ್ನೆರಡು ಮಂದಿ ಸಾಕ್ಷಿಗಳು ಆ ಮೊದಲೇ ಪೂರ್ತಿಯಾಗಿ ಸಾಕ್ಷ್ಯ ಹೇಳಿದ್ದರು. ಆದರೂ ಸ್ಟೀವ್ಹನ್ಸನ್ನನೂ ಸಾಕ್ಷ್ಯ ಹೇಳದೆ ತಪ್ಪಿಸಿಕೊಳ್ಳಲಾಗಲಿಲ್ಲ. ಸ್ಟೀವ್ಹನ್ಸನ್ ಈ ರೀತಿ ವಿವರಣೆ ಕೊಟ್ಟನು : "ಯಂತ್ರದ ಮಗ್ಗಗಳಿಂದ ಮ್ಯಾಂಚೆಸ್ಟರಿನಲ್ಲಿ ಬಟ್ಟೆಯ ತಯಾರಿಕೆ ಬಹು ಹೆಚ್ಚಿದೆ. ಆದರೆ ಆ ಬಟ್ಟೆಗಳನ್ನು ಸುಲಭವಾಗಿಯೂ, ಅಗ್ಗವಾಗಿಯೂ, ಜಾಗ್ರತೆಯಾಗಿಯೂ ಲಿವರ್‌ಪೂಲ್ ಬಂದರಿಗೆ ಸಾಗಿಸುವುದಕ್ಕೆ ವಾಹನ ಸೌಕರ್ಯವು ಏರ್ಪಟ್ಟಿಲ್ಲ. ಬ್ರಿಡ್ಜ್‌ವಾಟರ್ ನಾಲೆಯ ಮುಖಾಂತರ ಕಲ್ಲಿದ್ದಲು ಸಾಗಿಸುವ ಕೆಲಸವು ಚೆನ್ನಾಗಿ ನಡೆಯುತ್ತಿಲ್ಲವೆಂದು ಹಲವು ಸಲ ಈ ಸಭೆಯಲ್ಲಿ ನಿಮ್ಮ ಗಮನಕ್ಕೆ ಬಂದಿದೆ. ಹಬೆ ಯಂತ್ರದ ರೈಲ್ವೆಗಳಿಂದ ಈ ಕೆಲಸವು ಸುಲಭವಾಗುವುದೆಂಬುದನ್ನು ಪ್ರತ್ಯಕ್ಷವಾಗಿ ತೋರಿಸುವುದು ಸಾಧ್ಯವಿದೆ. ಈ ರೈಲ್ವೆಯನ್ನು ಹಾಕಿಸಿ. ಇಂಗ್ಲೆಂಡು ಇತರ ದೇಶಗಳಿಗಿಂತ ಮೊದಲೇ ಒಂದು ಹೆಜ್ಜೆ ಮುಂದುವರಿಯುವುದಕ್ಕೆ ಉತ್ತಮ ಅವಕಾಶವಿದೆ."

ವಿರೋಧ ಪಕ್ಷದ ಲಾಯರಾದ ಕ್ಯೂರ್ಲರವರು, 'ಲೋಕೊಮೊಟಿವ್' ಯಂತ್ರಗಳನ್ನು ನೋಡಿ ಕುದುರೆಗಳು ಬೆದರಿಯೇ ಬೆದರುತ್ತವೆಂದರು. ಮಿ|| ಜಾರ್ಯ್ ಅವರು, "ಅಂಥ ಅಪಾಯವುಂಟೆ ?" ಎಂದು ಕೇಳಿದರು. ಸ್ಟೀವ್ಹನ್ಸನ್ನನು : "ಅಂಥಾದ್ದೇನೂ ಇಲ್ಲ. ಈ ಕಾಲದಲ್ಲಿ ಯಂತ್ರಗಳನ್ನು ನೋಡಿ ಕುದುರೆಗಳಿಗೆ ಅಭ್ಯಾಸವಾಗಿಬಿಟ್ಟಿದೆ. ಕೆಲವಕ್ಕೇನೋ ಒಂದು ಕೈಗಾಡಿಯನ್ನು ನೋಡಿದರೂ ಹೆದರಿಕೆಯಾಗಬಹುದು" ಎಂದನು.

ವಿರೋಧ ಪಕ್ಷದ ಆಲ್ಡರ್‌ಸನ್ನರು ಯಂತ್ರದ ಜೋಡಣೆ, ಸುರಕ್ಷಿತತೆ—ಇವುಗಳ ವಿಚಾರವಾಗಿ ಸೂಕ್ಷ್ಮವಾದ ಪ್ರಶ್ನೆಗಳನ್ನೇ ಕೇಳಿದರು. "ಒಂದೇ ಒಂದು ಸಾವು ಕೂಡ ಆಗಿಲ್ಲ" ಎಂದು ಸ್ಟೀವ್ಹನ್ಸನ್ ಹೇಳಿ, "ಅದರಿಂದ ಈ ಯಂತ್ರಗಳು ಎಷ್ಟು ಸುರಕ್ಷಿತವಾದುವೆಂದು ತಿಳಿಯುತ್ತದೆ"—ಎಂದನು. ಆದರೆ 'ಬ್ಲೆಂಕಿನ್‌ಸಾಪ್' ಎಂಬಲ್ಲಿ ಗಣಿಗಳ ಬಳಿ ಇದ್ದ ರೈಲ್ವೆಯ ಇಂಜಿನು ಒಡೆದು ಹೋದುದನ್ನು ತಿಳಿಸಿ ಸ್ಟೀವ್ಹನ್ಸನ್ನನು, "ಆ ಅನಾಹುತಕ್ಕೆ ಆ ರೈಲ್ವೆಯ 'ಡ್ರೈವರ್' ಕುಡಿದು ಜ್ಞಾನತಪ್ಪಿದ್ದುದು ಕಾರಣ ; ಅದಕ್ಕೆ ಹಬೆ ಕಾರಣವಲ್ಲ, ಸಾರಾಯಿ ಕಾರಣ" ಎಂದನು.

"ಅದೆಲ್ಲ ಇರಲಿ, ನಿಮ್ಮ 'ಲೋಕೊಮೊಟಿವ್' ಎಷ್ಟು ವೇಗವಾಗಿ

ಹೋಗುವುದೆಂದು ಸ್ಪಷ್ಟವಾಗಿ ಹೇಳಿ"—ಎಂದು ಆಲ್ಡರ್ಸ‌ನ್ ಕೇಳಿದರು. ಸ್ಟೀಫನ್‌ಸನ್ನನ ಸ್ನೇಹಿತರು ಸಂಜ್ಞೆಗಳನ್ನು ಮಾಡಿ, ಅವನು ಸರಿಯಾಗಿ ಉತ್ತರ ಹೇಳಬೇಕೆಂದು ಸೂಚಿಸಿದರು. ಆದರೆ ಅವನು ಅದಾವುದಕ್ಕೂ ಗಮನ ಕೊಡದೆ: 20 ಟನ್ನುಗಳ ಭಾರ ಹೇರಿದ್ದರೆ, ಘಂಟೆಗೆ $7\frac{1}{2}$ ಮೈಲಿಗಳ ವೇಗದಲ್ಲಿ ಬಿಡಬಹುದೆಂದು ಸೂಚಿಸುತ್ತೇನೆ. 40 ಟನ್ನುಗಳ ತೂಕ ಹಾಕಿದ್ದರೆ ಘಂಟೆಗೆ 4 ಮೈಲಿಗಳ ವೇಗದಲ್ಲಿ ಬಿಡಬಹುದು" ಎಂದನು. ಹೀಗೆಂದವನೇ ಅಷ್ಟಕ್ಕೇ ನಿಲ್ಲಿಸದೆ, "ಘಂಟೆಗೆ 12 ಮೈಲಿಗಳು ಹೋಗುವುದು ಕೂಡ ಸಾಧ್ಯವೇ ಸರಿ" ಎಂದನು.

ತಾನು ಹಾಗೆ ಹೇಳಿದುದು ತಪ್ಪಾಯಿತೆಂದು ಕ್ಷಣಮಾತ್ರದಲ್ಲಿ ಸ್ಟೀಫನ್‌ಸನ್‌ಗೆ ತಿಳಿಯಿತು. ಅವನ ಪರವಾಗಿದ್ದವರಿಗೆ, ಮತ್ತು ಅನಿಶ್ಚಿತ ಮನಸ್ಸಿನಿಂದಿದ್ದವರಲ್ಲಿ ಬಹು ಮಂದಿಗೆ, ಆ ಕೆಚ್ಚಿನ ಮಾತುಗಳಿಂದ ಭಯವಾಯಿತು. "ಸ್ಟೀಫನ್‌ಸನ್ನನು ಶುದ್ಧ ದಡ್ಡನಿರಬೇಕು, ಅಥವಾ ಮೋಸಗಾರನಿರಬೇಕು" ಎಂದು ಅವರು ಊಹಿಸಿದರು.

ಏಕೆಂದರೆ, ಘಂಟೆಗೆ ನಾಲ್ಕು ಮೈಲಿಗಳಿಗಿಂತ ಹೆಚ್ಚು ವೇಗವಾಗಿ ಒಂದು ವಾಹನವು ಹೋಗುವುದೆಂದರೆ ಆಗಿನ ಕಾಲದಲ್ಲಿ ಜನರು ನಂಬುತ್ತಿರಲಿಲ್ಲ. ಅಲ್ಲದೆ ಬೆಚ್ಚಿ ಬೀಳುತ್ತಿದ್ದರು!

ಸ್ಟೀಫನ್‌ಸನ್ನನು ಹಿಂದು ಮುಂದು ಯೋಚಿಸದೆ ಮಾತನಾಡಿದ್ದರಿಂದ ಉಂಟಾಗಿದ್ದ ಅನನುಕೂಲವಾದ ಭಾವನೆಯನ್ನು ತಿದ್ದುವುದಕ್ಕೆ ಮಿ|| ಜಾಯ್ ಆದಷ್ಟು ಪ್ರಯತ್ನಿಸಿದರು. "ಸ್ಟೀಫನ್‌ಸನ್ ಹೇಳಿದಷ್ಟೇ ವೇಗವಾಗಿ ವಾಸ್ತವವಾಗಿಯೂ ರೈಲುಗಳು ಓಡುವುದಿಲ್ಲ; ಕೇವಲ ಶಾಸ್ತ್ರವಿಚಾರ ವಿಮರ್ಶೆಗೆ ಅವು ಅಷ್ಟು ವೇಗವಾಗಿ ಹೋಗುವುವೆಂದು ಲೆಕ್ಕಾಚಾರಕ್ಕಾಗಿ ಆ ರೀತಿ ಊಹಿಸಿಕೊಳ್ಳಬೇಕಾಗುತ್ತದೆ" ಎಂದು ಮಿ|| ಜಾಯ್ ವಾದಿಸಿದರು.

ಆದರೆ ಸ್ಟೀಫನ್‌ಸನ್ ಎಚ್ಚರಿಕೆಯಿಲ್ಲದೆ ನುಡಿದ ಮಾತಿನಿಂದ ಆಗುವ ದುಷ್ಪರಿಣಾಮವು ಆಗಿಯೇ ಹೋಗಿದ್ದಿತು. ಒಬ್ಬ ಸದಸ್ಯರು ಅರ್ಥವಿಲ್ಲದೆ ಅವ್ಯವಹಾರಿಕವಾಗಿ ಕೇಳಿದ ಪ್ರಶ್ನೆಯೊಂದಕ್ಕೆ ಸ್ಟೀಫನ್‌ಸನ್ನನು ಕೊಟ್ಟ ಜಾಣತನದ ಉತ್ತರದಿಂದೇನೋ ಸ್ವಲ್ಪ ಒಳ್ಳೆಯ ಪರಿಣಾಮವಾಯಿತು:—

ಆ ಸದಸ್ಯರ ಹೆಸರು ಮಿ|| ಪಾರ್ಕ್ ಎಂದು. ಅವರು ಬಹಳ ಬುದ್ಧಿವಂತ

ರಂತೆ ಒಂದು ಪ್ರಶ್ನೆ ಕೇಳಿದರು: "ಒಂದು ವೇಳೆ ಇಂಜಿನ್ನು ಘಂಟೆಗೆ ಹತ್ತು ಮೈಲಿ ವೇಗವಾಗಿ ಹೋಗುತ್ತಾ ಇದೆಯೆನ್ನಿ. ಆಗ ಒಂದು ಹಸುವು 'ಲೈನಿ'ನ ಮೇಲೆ ನುಗ್ಗಿ, 'ಇಂಜಿನ್ನಿ'ಗೆ ಅಡ್ಡವಾಗಿ ಸಿಕ್ಕಿದರೆ ಬಹಳ ಅನಾಹುತ ವಾಗುತ್ತದೆ, ಅಲ್ಲವೆ ?"

ಸ್ಟೀಫರ್ನಸರ್ : "ಸಂದೇಹವೇನು ? ಬಹಳ ಅನಾಹುತ—ಹಸುವಿಗೆ !"

ಮೂರನೆಯ ದಿನದ ವಿಚಾರಣೆಯೇ ಅಂತಿಮ ವಿಚಾರಣೆಯಾಗಿದ್ದಿತು. ಆ ದಿನ ಆಲ್ಡರ್‌ಸರ್ ಮತ್ತು ಕರ್ಲ್ಲ ಇವರಿಬ್ಬರೂ ಬಹಳ ಕ್ಲಿಷ್ಟವಾದ ಪ್ರಶ್ನೆಗಳನ್ನು ಕೇಳಿದರು. ರೈಲು ಲೈನನ್ನು ಯಾವ ಮಾರ್ಗದಲ್ಲಿ ಹಾಕಬಹುದೆಂಬ ವಿಚಾರವಾಗಿ ಅವರು ಪ್ರಶ್ನೆಗಳನ್ನು ಕೇಳಿದರು. ಆ ಪ್ರಶ್ನೆಗಳಿಗೆ ಕೂಡಲೆ ಉತ್ತರ ಹೇಳುವುದು ಸ್ಟೀಫರ್ನಸನ್ನನಿಗೆ ಕಷ್ಟಕರ ವಾಗಿದ್ದಿತು. ಉತ್ತರಗಳಿಗೆ ಆತನು ಹೆಚ್ಚಾಗಿ ತನ್ನ 'ಸರ್ವೇಯರು'ಗಳನ್ನು ಅವಲಂಬಿಸಬೇಕಾಗಿದ್ದಿತು. 'ಸರ್ವೇ' ನಡೆಯಿಸುವುದಕ್ಕೇ ಸಾಕುಸಾಕಾಗಿ ಹೋಗಿದ್ದಿತು. ಒಟ್ಟಿನಲ್ಲಿ ಆ ವಿಚಾರಗಳಲ್ಲಿ ಸ್ಟೀಫರ್ನಸನ್ನನಿಗೆ ಸ್ವಂತವಾದ ತಿಳಿವಳಿಕೆ ಇರಲಿಲ್ಲ. ಅಂತು, ಅವನು ಕೊಟ್ಟ ಉತ್ತರಗಳು ಏನೇನೂ ಸಮರ್ಪಕವಾಗಿರಲಿಲ್ಲ. ಅವನ ಪರವಾಗಿ, ರೈಲನ್ನು ಹಾಕಬೇಕೆಂಬುದನ್ನು ಸಮರ್ಥಿಸಿ ಸಾರ್ಜೆಂಟ್ ಸ್ಪಾಂಕಿ ಅಮೋಘ ಭಾಷಣವನ್ನು ಮಾಡಿ ಪರಿಸ್ಥಿತಿ ಯನ್ನು ಆದಷ್ಟು ಹದಕ್ಕೆ ತಂದನು. ಅನಂತರ ಮಿ॥ ಹ್ಯಾರಿಸರ್ ವಿರುದ್ಧ ಪಕ್ಷದ ವಾದಾಂಶಗಳನ್ನು ಸಭೆಯ ಮುಂದಿಟ್ಟರು.

ಸ್ಟೀಫರ್ನಸರ್‌ಗೆ ವಿರುದ್ಧವಾಗಿ ಯಾವ ಯಾವ ತಪಸೀಲು ವಿವರಗಳನ್ನು ತಿಳಿಸಬಹುದಾಗಿದ್ದಿತೋ ಅವುಗಳಲ್ಲಿ ಒಂದನ್ನಾಗಲಿ ಹ್ಯಾರಿಸರ್ ಮರೆತಿರಲಿಲ್ಲ. "'ಲೈನಿ'ನಲ್ಲಿ ಕೆಲವು ಭಾಗಗಳನ್ನು ಮೋಸದಿಂದ 'ಸರ್ವೆ' ಮಾಡಿದ್ದುದು ಒಂದು; ಎರಡನೆಯದು, ಭಾನುವಾರದ ದಿನ ಸ್ಥಳದ ಜನ ರೆಲ್ಲಾ ಚರ್ಚಿಗೆ ಹೋಗಿದ್ದಾಗ, ಕೆಲವು ಭಾಗಗಳನ್ನು 'ಸರ್ವೆ' ಮಾಡಿದ್ದುದು; ಮೂರನೆಯದು, ಆ ದಾರಿಯಲ್ಲಿ ಬರುವ 'ಚಾಟ್‌ಮಾಸ್' ಎಂಬ ಬದುವನ್ನು ಯಾವ ರೀತಿ ಮುಚ್ಚಿ 'ಲೈನು' ಹಾಕಬೇಕೆಂಬುದನ್ನು ಸ್ಟೀಫರ್ನಸನ್ನನೇ ಸರಿಯಾಗಿ ತಿಳಿಸದಿದ್ದುದು; ಒಟ್ಟಿನಲ್ಲಿ ರೈಲ್ವೆ ಹಾಕುವ ವಿಚಾರವೇ ಸರಿಯಾದುದಲ್ಲ. ಅಂತು ಸ್ಟೀಫರ್ನಸರ್ ಸರಿಯಾದ ರೀತಿ

ಯಲ್ಲಿ ವಿಷಯುಗಳನ್ನು ತಿಳಿದುಕೊಳ್ಳದೆ ಈ ಯೋಜನೆ ಪ್ರಾರಂಭಿಸಿದ್ದಾನೆ; ವಿಜ್ಞಾನ ರೀತ್ಯಾ ಅವನ ಕಾರ್ಯಕ್ಕೆ ಯಾವ ಆಧಾರವನ್ನೂ ಅವನು ತೋರಿಸಲಿಲ್ಲ"ವೆಂದು ಹ್ಯಾರಿಸರ್ ವಾದಿಸಿದನು. "ಹನ್ನೆರಡು ಮೈಲಿ ವೇಗವಂತೆ! ಅದಕ್ಕೆ ಒಂದು ಇಂಜಿನಂತೆ!! ಇಂಜಿನ್ನಿನ ಹಿಂದೆ ಕೂತು ಬೆಂಕಿಯನ್ನು ಉರಿಸುತ್ತಾ ಇರುವುದಂತೆ!!! —ಇದು ಯಾವುದೂ ಸಾಧ್ಯವಾಗುವುದಿಲ್ಲ; ಗಾಡಿಯು ಆರು ಮೈಲಿ ಕೂಡ ಹೋಗಲಾರದು; ಅಷ್ಟೇಕೆ, ಈ ರೈಲಿಗಿಂತ ವೇಗವಾಗಿ ನಾನು ನಾಲೆಯಲ್ಲಿ ದೋಣಿಯಲ್ಲಿ ಪ್ರಯಾಣಮಾಡುತ್ತೇನೆ"—ಎಂದು ಹ್ಯಾರಿಸರ್ ಸವಾಲು ಹಾಕಿದನು.

ಮೂರನೆಯ ದಿನವೂ ವಿರೋಧ ಪಕ್ಷದವರೇ ವಾದಿಸಿದರು. ಆ ದಿನದ ಭಾಷಣಕಾರ ಆಲ್ಡರ್‌ಸರ್. ಖಾಸಗಿ ಜನರಿಗೆ ರೈಲಿನಿಂದ ಎಷ್ಟು ತೊಂದರೆಯಾಗುವುದೆಂಬುದನ್ನು ಆತನು ಮುಖ್ಯವಾಗಿ ವಿವರಿಸಿದನು. "ರೈಲಿನಿಂದ ಸಾಮಾನು ಸಾಗಿಸುವುದು ಬೇರೆ ವಿಧಾನಗಳಿಗಿಂತ ಸುರಕ್ಷಿತವಾಗಿಯೂ, ಸುಲಭ ವೆಚ್ಚದಲ್ಲೂ, ಜಾಗ್ರತೆಯಾಗಿಯೂ ಆದರೇನೋ ಸರಿಯೆ. ಆಗ ಒಟ್ಟು ಪ್ರಜೆಗಳ ಹಿತಕ್ಕಾಗಿ ಕೆಲವು ಜನರಿಗೆ ನಷ್ಟವಾದರೂ ಚಿಂತೆಯಿಲ್ಲ. ಆದರೆ ಆ 'ಲೈನು' ನಿಮ್ಮ ಉದ್ಯಾನವನದ ಮೇಲೆಯೇ ಹಾದುಹೋಗಬೇಕೆನ್ನಿ. ಆಗ ಅರ್ಧ ಘಂಟೆಗೊಂದು ಸಲ ಒಂದು ರೈಲು ಆ ಮಾರ್ಗವಾಗಿ ಹಾದುಹೋಗುತ್ತದೆ. ಆಗ ನಿಮಗೆ ಎಷ್ಟು ತೊಂದರೆಯಾಗುತ್ತದೋ ಊಹಿಸಿ ನೋಡಿ. ಯಾವಾಗಲೂ ಹೊಗೆ, ಧೂಳು, ಗಲಭೆ, ಅಲ್ಲವೆ? ಈ ತೊಂದರೆಗಳೆಲ್ಲಾ ನಿಜವೇ ತಾನೆ? ಅಥವಾ ನಾನೇನಾದರೂ ಕಟ್ಟುಕಥೆ ಹೇಳುತ್ತೇನೆಯೋ, ಯೋಚಿಸಿ ನೋಡಿ! ಈ ತೊಂದರೆಗಳೇನು ಸಣ್ಣಪುಟ್ಟ ತೊಂದರೆಗಳೋ, ನಿಜವಾಗಿ ಅನಾಹುತಗಳೋ, ನೀವೇ ಹೇಳಿ. ಇರಲಿ, ಇಷ್ಟೊಂದು ಕಷ್ಟಪಟ್ಟರೂ ಬರುವ ಲಾಭವೇನು? ಹತ್ತಿಯನ್ನು ಈಗ ಮೂರು ಮೈಲಿ ವೇಗದಲ್ಲಿ ಸಾಗಿಸುವುದಕ್ಕೆ ಬದಲಾಗಿ ಹನ್ನೆರಡು ಮೈಲಿ ವೇಗದಲ್ಲಿ ಸಾಗಿಸಬಹುದು; ಅಷ್ಟೇ ತಾನೆ? ಇದರಿಂದ ಖಂಡಿತವಾಗಿ ಅನುಕೂಲವಾಯಿತೆಂದು ಸಾಧಿಸುವುದಕ್ಕೇನೂ ಆಗುವುದಿಲ್ಲ. ಆದರೆ ರೈಲು ಹಾಯುವ ಮಾರ್ಗದ ಮಾಲೀಕರಿಗೆ ತೊಂದರೆಯಾಗುವುದೇನೋ ಶತಸ್ಸಿದ್ಧ. ತೊಂದರೆ ಖಂಡಿತವಾಗಿದೆ;

ಆದರೆ ಅನುಕೂಲ ಮಾತ್ರ ಸಂದೇಹಾಸ್ಪದವಾಗಿದೆ. ಹೀಗಿರುವಾಗ ಈ ಯೋಜನೆಯನ್ನು ವಿರೋಧಿಸಲೇ ಬೇಕಾಗುತ್ತದೆ. ಒಟ್ಟಿನಲ್ಲಿ ಸ್ಟೀಫನ್‌ಸನ್ ಮಾಡುವ ಯೋಜನೆ ಶುದ್ಧ ಅರ್ಥವಿಲ್ಲದ್ದು"—ಹೀಗೆಂದು ಆಲ್ಡರ್‌ಸನ್ ವಾದವನ್ನು ಪುಷ್ಟೀಕರಿಸಿದನು.

ಮಿ|| ಆಡಮ್ಸ್‌ರವರಿಗೆ ಕೊನೆಯದಾಗಿ ವಾದಿಸುವ ಅವಕಾಶ ಸಿಕ್ಕಿತು. ರೈಲಿನ ವಿಚಾರದಲ್ಲಿದ್ದ ಕೆಲವು ಸಂದೇಹಗಳನ್ನು ಅವರು ಒಪ್ಪಿದರು. "ಆದರೂ ಈ ಹೊಸ ಸಂಶೋಧನೆಯನ್ನು ಪ್ರಾರಂಭದಲ್ಲೇ ಮೊಟಕು ಮಾಡಿಬಿಡಬೇಡಿ. ಒಂದು ಸಲ ಕಾರ್ಯರೂಪಕ್ಕೆ ತಂದು, ಸಾಧಕ ಬಾಧಕಗಳನ್ನು ನೋಡೋಣ. ಇದಿಷ್ಟೇ ನನ್ನ ಪ್ರಾರ್ಥನೆ," ಎಂದು ಹೇಳಿ ಅವರು ಮುಗಿಸಿದರು.

ಆದರೆ ಆ ಪ್ರಾರ್ಥನೆಗೆ ಮನ್ನಣೆ ದೊರೆಯಲಿಲ್ಲ. ಚರ್ಚೆಗೆ ಬಂದಿದ್ದ ವಿಷಯವು ಸಭೆಯಿಂದ ತಿರಸ್ಕೃತವಾಯಿತು.

ಮೊಟ್ಟಮೊದಲು ಸ್ಟೀಫನ್‌ಸನ್‌ಗೆ ಬಹಳ ನಿರಾಶೆಯಾಯಿತು. ಜನರು ಅವನನ್ನು 'ಮಂಕ', 'ಹುಚ್ಚ', ಎಂದು ಮೊದಲಾಗಿ ಕರೆದರು. ಅವನ ಯೋಚನೆಗಳೆಲ್ಲಾ ಹಗಲುಗನಸುಗಳೆಂದು ತಿಳಿದರು. ಅವನ ಸ್ನೇಹಿತರಿಗೂ ಸ್ವಲ್ಪಮಟ್ಟಿಗೆ ಅಪನಂಬಿಕೆ ಹುಟ್ಟಿತು. ತನ್ನ ಯೋಚನೆಯನ್ನು ಬಿಟ್ಟುಬಿಡುವುದೇ ಒಳ್ಳೆಯದೋ?—ಎಂದು ಆತನೂ ಒಂದೊಂದು ಸಲ ಚಿಂತಿಸುವನು. ಹಬೆ ಗಾಡಿಯ ಅವತರಣಕ್ಕೆ ಪರಿಸ್ಥಿತಿಯು ಅತ್ಯಂತ ನಿರಾಶಾಜನಕವಾಗಿದ್ದಿತು.

ಆದರೇನು? 'ಸ್ಟಾಕ್ಟನ್—ಡಾರ್ಲಿಂಗ್ಟನ್ ರೈಲ್ವೆ'ಯನ್ನು ಹಾಕುವ ಕೆಲಸವು ಪೂರ್ತಿಯಾಗಬೇಕಾಗಿದ್ದಿತು. ಆ ಸಂದರ್ಭದಲ್ಲಿ ತನ್ನ ಅಭಿಪ್ರಾಯವು ಸರಿಯೆಂದು ತೋರಿಸಿಕೊಡಬೇಕೆಂದು ಸ್ಟೀಫನ್‌ಸನ್ ತೀರ್ಮಾನಿಸಿದನು. ಅದು ಜಯಪ್ರದವಾದರೆ ಇನ್ನೊಂದು ರೈಲ್ವೆಯ ಕೆಲಸವನ್ನು ಪ್ರಾರಂಭಿಸಬಹುದಾಗಿದ್ದಿತು. 1825ನೆಯ ಇಸವಿ ಸೆಪ್ಟೆಂಬರ್ 27ನೆಯ ತಾರೀಖು ಆ ರೈಲಿನ ಪ್ರಾರಂಭೋತ್ಸವಕ್ಕೆ ಆತನು ಪಾರ್ಲಿಮೆಂಟ್ ಸಮಿತಿಯ ಸದಸ್ಯರನ್ನೆಲ್ಲಾ ಆಹ್ವಾನಿಸಿದನು.

ಕೆಲವರಂತೂ ಬಂದರು. ಡಾರ್ಲಿಂಗ್ಟನ್ನಿನಿಂದ ಸ್ಟಾಕ್‌ಟನ್ ವರೆಗೆ



‘ಲೋಕೊಮೋಷನ್’ ಎಂಬ ಆ ರೈಲಿನ ಮೇಲೆಯೇ ಎಲ್ಲರ ಕಣ್ಣು ಇದ್ದಿತು.

ಹಾಕಿದ್ದು ಹೊಳೆಯುತ್ತಿದ್ದ ಕಬ್ಬಿಣದ ಪಟ್ಟಿಗಳ ಪಕ್ಕದಲ್ಲಿ ನಿಂತು ಅವರು ಹುಸಿನಗು ನಗುತ್ತಿದ್ದರು. ಸಾವಿರಾರು ಮಂದಿ ಜನಗಳು ಸೇರಿದ್ದರು. 'ಲೋಕೊಮೋಷನ್' ಎಂಬ ಆ ರೈಲಿನ ಮೇಲೆಯೇ ಎಲ್ಲರ ಕಣ್ಣೂ ಇದ್ದಿತು. ಅದರ ಯಂತ್ರದ ಭಾಗಗಳನ್ನೆಲ್ಲಾ ನೋಡಿ ಜನರು ಅಚ್ಚರಿಪಡುತ್ತಿದ್ದರು. 'ಡಿಕ್ಸನ್' ಎಂಬಾತನು ಅದರ ಡ್ರೈವರ್. ರೈಲು ಹೊರಡುವುದಕ್ಕೆ ಸೂಚನೆ ಕೊಟ್ಟುದೂ ಆಯಿತು.

ಆ ರೈಲಿಗೆ ಮೂವತ್ತೆಂಟು ಗಾಡಿಗಳನ್ನು ಜೋಡಿಸಿದ್ದರು. ಅಷ್ಟು ಗಾಡಿಗಳೂ ಹೆಚ್ಚು ದೂರ ಓಡುವುದೆಂದರೆ ಅದು ಅಸಾಧ್ಯವಾದ ವಿಚಾರವೆಂದು ಕಾಣುತ್ತಿದ್ದಿತು! ಅವುಗಳಲ್ಲಿ ಹದಿನೇಳು ಗಾಡಿಗಳಲ್ಲಿ ಕಲ್ಲಿದ್ದಲು ತುಂಬಿದ್ದಿತು. ಉಳಿದ ಗಾಡಿಗಳಲ್ಲಿ 450 ಮಂದಿ ಜನ ಕುಳಿತಿದ್ದರು. ಆದರೂ ಅವು ಅಷ್ಟೊಂದು ಅಚ್ಚುಕಟ್ಟಾಗಿಯೇನೂ ಇರಲಿಲ್ಲ. ಕೆಲವು ಗಾಡಿಗಳಂತೂ 'ಕೋಚ್' ಗಾಡಿಗಳನ್ನು ಉಪಯೋಗಿಸಿಕೊಂಡು ಕಟ್ಟಿದ್ದವುಗಳೇ ಆಗಿದ್ದುವು. ಅವುಗಳನ್ನು ಚೆನ್ನಾಗಿ ಶೃಂಗರಿಸಲಾಗಿದ್ದಿತು. ಅವುಗಳಲ್ಲಿ ಅಲ್ಲಿಗೆ ಬಂದಿದ್ದ 'ಪಾರ್ಲಿಮೆಂಟ್' ಸದಸ್ಯರು ಕುಳಿತಿದ್ದರು. ಜನಗಳು ಕುಳಿತಾಗ ಅವರಿಗೂ ಸ್ವಲ್ಪ ಹೆದರಿಕೆಯೇ ಆಯಿತು. ಕುಳಿತವರನ್ನು ಕೆಲವರು ಹೆದರಿಸಿ ಎಚ್ಚರಿಕೆ ಕೊಟ್ಟರು. ಮುಂದೇನಾಗುವುದೋ ಎಂದು ಎಲ್ಲರೂ ಕಾತುರರಾಗಿದ್ದರು.

'ಗಾರ್ಡ್' ಮೆಲ್ಲನೆ ಸಿಳ್ಳೆ ಊದಿದನು. ಅವನಿಗೂ ಮನಸ್ಸಿಗೆ ಬೇಜಾರು: ಏಕೆಂದರೆ ಆತನು ಗಾಡಿಯ ಹೊರಗಡೆ ಇದ್ದ ಪಟ್ಟಿಯ ಮೇಲೆ ನಿಂತುಕೊಂಡು ಹೋಗಬೇಕೆಂದು, ಹೊಸದಾಗಿ 'ಪೊಲೀಸ್' ನಿಬಂಧನೆ ಜಾರಿಯಾಗಿದ್ದಿತು. ಅನಂತರ, ಮೊದಲೇ ಏರ್ಪಾಟಾಗಿದ್ದಂತೆ, ಒಂದು ಗುಂಡಿನ ಶಬ್ದವಾಯಿತು. ಡಿಕ್ಸನ್ ಒಂದು ಕೈಕೋಲನ್ನು ಅದುಮಿ ಯಂತ್ರವು ಚಲಿಸುವಂತೆ ತಿರುಗಿಸಿದನು. ಮೇಲುಗಡೆ 'ಚಿಮಣಿ'ಯಿಂದ ಹೊಗೆಯು ಭುಗ್ ಭುಗ್ಗೆಂದು ಮೇಲಕ್ಕೇರಿತು. 'ಪಿಸ್ಟನ್'ಗಳಿಂದ 'ಭುಸ್ ಭುಸ್' ಶಬ್ದವು ಹೊರಟಿತು. ಪಟ್ಟಿಗಳು ಹಿಂದಕ್ಕೂ ಮುಂದಕ್ಕೂ ಚಲಿಸಿದುವು. ಚಕ್ರಗಳು ತಿರುಗಿದವು. ಗಾಡಿಗಳು ಜಗ್ಗಿದವು; ಮುಂದೆ ನುಗ್ಗಿದವು.

ಜನರು ಜಯಘೋಷ ಮಾಡಿದರು. ಗಾಡಿಗಳು ವೇಗವೇಗವಾಗಿ

ಹೋಗುತ್ತಿದ್ದಾಗ, ಜನರು ಅದರ ಪಕ್ಕದಲ್ಲೇ, ಅದರ ಜೊತೆಯಲ್ಲಿ ಓಡಿದರು. ಗಾಡಿಯು ಹೋಗುವಾಗ ಹೇಗಿರಬಹುದೆಂದು ಜನರಿಗೆ ಮೊದಲು ಊಹಿಸುವುದಕ್ಕೆ ಸಾಧ್ಯವಾಗಿರಲಿಲ್ಲ. ಈಗ ಅವರಿಗೆ ವೇಗದ ಪ್ರತ್ಯಕ್ಷಾನುಭವವಾಯಿತು. ಮರಗಿಡಗಳೂ ಮನೆಗಳೂ ತಮ್ಮನ್ನು ಬಿಟ್ಟು ಹಿಂದೆ ಓಡುತ್ತಿದ್ದುವು. ಕುದುರೆಗಳು ಬೆದರಿದವು. ಹಸುಗಳು ಬಿರುಗಣ್ಣು ಬಿಟ್ಟು ನೋಡುತ್ತಿದ್ದುವು. ಮಕ್ಕಳು ಮರಿಗಳು ಕೂಗಿಕೊಂಡವು. ತಾಯಂದಿರು ಹೆದರಿ ತೆಪ್ಪಗಿದ್ದರು. 'ಕಟ್ ಕಟ್, ಗಡಗಡ, ಕಟ್ ಕಟ್, ಗಡಗಡ' ಎಂಬ ಶಬ್ದಗಳೊಡನೆಯೂ, 'ಭುಸ್ ಭುಸ್' ಎಂದು ಹೊಗೆಯನ್ನು ಗುಳುತ್ತಲೂ, ಕಿಡಿಗಳನ್ನು ಹಾರಿಸುತ್ತಲೂ ಮಧ್ಯೆ ಮಧ್ಯೆ ಕೂಗುತ್ತಲೂ, ರೈಲು ಬಂತು, ರೈಲು !

ಕಡೆಗೆ ಮೆಲ್ಲಮೆಲ್ಲನೆ ವೇಗ ಕಡಮೆಯಾಗಿ ರೈಲು ನಿಂತಿತು. ಅದು ಸ್ಟಾಕ್ಟನಿಗೆ ಬಂದು ನಿಂತಾಗ ಬಹಳ ಜನ ನೋಡುವುದಕ್ಕೆ ಅಲ್ಲಿ ಕಿಕ್ಕಿರಿದಿದ್ದರು. ಅವರೆಲ್ಲರೂ ರೈಲಿನಲ್ಲಿ ಪ್ರಯಾಣಮಾಡಿ ಬಂದವರನ್ನು ಕಂಡು ಕುತೂಹಲದಿಂದ ಪ್ರಶ್ನೆಗಳನ್ನು ಕೇಳಿದರು. "ಪ್ರಯಾಣ ಹೇಗಿತ್ತು ? ನೋವಾಯಿತೇನು ?" ಎಂದು ಮುಂತಾಗಿ ಪ್ರಶ್ನೆಗಳನ್ನುದುರಿಸಿದರು.

ಅಂತು ಜಾರ್ಜ್ ಸ್ಟೀಫನ್ಸನ್ ತನ್ನ ಉದ್ಯಮದಲ್ಲಿ ವಿಜಯಿಯಾದನು. ಹಬೆಯ ಶಕ್ತಿಯ ವಿಜಯವು ಅವನ ವೈಯಕ್ತಿಕ ಜಯವಾಗಿದ್ದಿತು. ತನ್ನ ಮೊದಲನೆಯ ರೈಲನ್ನು ಹಾಕಿದಂದಿನಿಂದ ಹದಿನೈದು ವರ್ಷಕಾಲ ಆತನು ಪ್ರಪಂಚದ ಎಲ್ಲ ದೇಶಗಳಿಗಾಗಿಯೂ 'ಲೋಕೊಮೊಟಿವ್' ಯಂತ್ರಗಳನ್ನು ತಯಾರಿಸಿ ಕೊಡುತ್ತಿದ್ದನು. 1845 ರಲ್ಲಿ, ತನ್ನ ಅರವತ್ತನಾಲ್ಕನೆಯ ವಯಸ್ಸಿನಲ್ಲಿ, ಆತನು ವಿಶ್ರಾಂತನಾಗಿ ತನ್ನ ಹಳ್ಳಿಯಲ್ಲಿ ನೆಲಸಿ, ತೋಟದ ಕೆಲಸಗಳನ್ನು ಮಾಡಿಕೊಂಡು ಕಾಲ ಕಳೆಯುವುದಕ್ಕೆ ಪ್ರಾರಂಭಿಸಿದನು. ಆ ವಯಸ್ಸಿನಲ್ಲಿ ತನ್ನ ಜೊತೆಯಲ್ಲಿ ಕುಸ್ತಿಗೆ ಸರಿಯಾದ ಜೊತೆ ಸಿಕ್ಕಿದರೆ ಆಗ ಅದಕ್ಕಿಂತ ಆತನಿಗೆ ಸಂತೋಷಕರವಾದುದು ಯಾವುದೂ ಇರಲಿಲ್ಲ. ಆ ವಯಸ್ಸಿನಲ್ಲೂ ಆತನು ಅತ್ಯಂತ ಬಲಶಾಲಿಯಾಗಿದ್ದನು. ಈ ಹೊಸ ಯುಗದ ಅಂಶಪುರುಷನಾದ ಜಾರ್ಜ್ ಸ್ಟೀಫನ್ಸನ್ 1848 ನೆಯ ಇಸವಿ ಆಗಸ್ಟ್ 12 ನೆಯ ತಾರೀಖು ಮೃತನಾದನು.

೫

# ಮಾತನಾಡುವ ಯಂತ್ರ

ಸ್ಯಾಮ್ಯುಯೆಲನೂ ಮತ್ತು ಕ್ಯಾಪ್ಟನ್ ಆಲ್ವಾ ಬ್ರಾಡ್ಲಿಯೂ ಮನೆಯ ಹಜಾರದಲ್ಲಿ ಕುಳಿತು ಹರಟೆ ಕೊಚ್ಚುತ್ತಿದ್ದರು.

"ಸ್ಯಾಮ್! ನಾನು ಹಿಂದೆ ನೋಡಿದಾಗ ಇದ್ದುದಕ್ಕಿಂತ ಈಗ ನಿನ್ನ ಆ ಕಿರಿಯ ಮಗ ಬಹಳ ಬೆಳೆದಿದ್ದಾನಯ್ಯ."—

ಮಾತನಾಡಿದವನು ಕ್ಯಾಪ್ಟನ್ ಬ್ರಾಡ್ಲಿ. ತಂಬಾಕದ ಕೊಳವೆಯೊಳಗೆ ಹೊಗೆಸೊಪ್ಪನ್ನು ತುಂಬುತ್ತಾ ಕ್ಯಾಪ್ಟನನು ಸ್ಯಾಮ್ ಏನು ಹೇಳುವನೋ ಎಂದು ನೋಡುತ್ತಿದ್ದನು.

ಸ್ಯಾಮ್ ತನ್ನ ಮಗನ ಕಡೆಗೆ ತಿರುಗಿ ನೋಡಿದನು. ಬಾಲಕನು ದೂರದಲ್ಲಿ ಒಂದು ಕಲ್ಲುಬೆಂಚಿನ ಮೇಲೆ ಕುಳಿತು ಯಾವುದೋ ಪುಸ್ತಕವನ್ನು ನೋಡುತ್ತಿದ್ದವನು, ಹಠಾತ್ತನೆ ಪುಸ್ತಕವನ್ನು ಕೆಳಗಿರಿಸಿ ಬೀದಿಯ ಕಡೆ ಓಡಿದನು. ಕ್ಷಣಕಾಲ ಅವನನ್ನು ನೋಡಿದ ಮೇಲೆ ಸ್ಯಾಮ್ ಕ್ಯಾಪ್ಟನನ ಕಡೆಗೆ ತಿರುಗಿ ಹೇಳಿದನು.—

"ಆ ಪೋರನೋ? ಹೌದು, ಹೋದ ವರ್ಷಕ್ಕಿಂತ ಬಹಳ ಬೆಳೆದುಬಿಟ್ಟಿದ್ದಾನೆ. ಜಾಣನಾಗಿಯೂ ಇದ್ದಾನೆ. ಯಾವಾಗಲೂ 'ಇದು ಏಕೆ, ಅದು ಹೇಗೆ' ಎಂದು ಪ್ರಶ್ನೆಗಳ ಮಳೆಯನ್ನೇ ಸುರಿಸುತ್ತಾನೆ. ಅವನ ತಾಯಿಗೋ ಅವನು ಕೇಳಿದುದಕ್ಕೆಲ್ಲಾ ಉತ್ತರ ಹೇಳುವ ಆಶೆ. ಆದರೆ ನನಗಂತೂ ಒಂದೊಂದು ಸಲ ಬಹಳ ಬೇಸರವಾಗಿಬಿಡುತ್ತೆ."

"ಹ್ಞು! ಊರಿನಿಂದಾಚೆ ಕೆರೆಯಿದೆಯಲ್ಲಾ? ಅಲ್ಲಿನ ದೋಣಿಯವನೂ ಸಹ ಈ ಹುಡುಗನ ವಿಚಾರವನ್ನೇ ಹೇಳಿದ—'ಮಿಲಾನ್ ನಗರಕ್ಕೆ ನಾನೇನೂ ಹೊಸಬನಲ್ಲ'—ಎಂದು ದೋಣಿಯವನಿಗೆ ಹೇಳಿದೆ. ಹಾಗಾದರೆ 'ಎಡಿಸನ್ ಎಂಬೊಬ್ಬ ಹುಡುಗನಿದ್ದಾನೆ, ಗೊತ್ತಿದೆಯಷ್ಟೆ?'—ಎಂದ ಆ ದೋಣಿಯವನು. ಹುಡುಗನು ನನ್ನ ಸ್ನೇಹಿತನ ಮಗ ಎಂದು ತಿಳಿದ ಮೇಲೆ ದೋಣಿಯವನು 'ಒಂದು ಸಲ ಆ ಬಾಲಕನು ಕೆರೆಯಲ್ಲಿ

ಆಟವಾಡುತ್ತಾ ದೋಣಿಯವರ ಹಾಡುಗಳನ್ನು ಗಟ್ಟಿಯಾಗಿ ಹೇಳುತ್ತಾ, ಹಠಾತ್ತಾಗಿ ಕೆರೆಯೊಳಕ್ಕೆ ಹಾರಿದ'ನೆಂದೂ, 'ಕೂಡಲೇ ಅವನನ್ನು ನೀರಿನಿಂದ ಎತ್ತಿದೆ'ನೆಂದೂ, 'ಒಟ್ಟಿನಲ್ಲಿ ಬಹಳ ವಿಚಿತ್ರ ಹುಡುಗ'ನೆಂದೂ ಹೇಳಿದನು."

ಸ್ಯಾಮ್ಯುಯೆಲ್ ನಕ್ಕನು. "ನಾನಂತೂ ಹೀಗೆ ಲೆಕ್ಕವಿಲ್ಲದಷ್ಟು ವಿಷಯಗಳನ್ನು ತಿಳಿದುಕೊಳ್ಳಬೇಕೆನ್ನುವ ಬಾಲಕನನ್ನೇ ಕಂಡಿಲ್ಲವಯ್ಯ! ಈ ವೇಳೆಗಾಗಲೆ ಅವನು ಹೊಲಕ್ಕೆ ಹೋಗಿ ರೈತರನ್ನು ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳುತ್ತಿರಬಹುದು. ಹೋದ ವಾರ ಧಾನ್ಯದ ಮಳಿಗೆಗೆ ಹೋಗಿ ಧಾನ್ಯಗಳನ್ನು ಸುರಿಯುವುದನ್ನೇ ನೋಡುತ್ತಾ ಘಂಟೆಗಟ್ಟಲೆ ಕುಳಿತಿದ್ದ. ಅಂತು ಇವನು ಒಬ್ಬ ವಿಚಿತ್ರ ಹುಡುಗನೇ."

ಕ್ಯಾಪ್ಟನ್ ನಗುತ್ತಾ ಕೊಳವೆಯೊಳಕ್ಕೆ ಇನ್ನಷ್ಟು ತಂಬಾಕನ್ನು ಸೇರಿಸಿದನು. ಮಗನ ಪ್ರಶಂಸೆಯನ್ನು ತಂದೆಯು ಹೆಮ್ಮೆಯಿಂದ ಮುಂದುವರಿಸಿದನು :—

"ಇನ್ನೊಂದು ಸಲ ಹೊಲದಲ್ಲಿ ಆಡುತ್ತಿದ್ದ. ಆಗ ಆ ಬಟ್ಟೆ ಬರೆಗಳ ಕೊಳಕೋ, ದೇವರಿಗೇ ಪ್ರೀತಿ! 'ಏನು ಮಾಡುತ್ತಿದ್ದೆಯೋ' ಎಂದುದಕ್ಕೆ 'ಮೊಟ್ಟೆಗಳ ಮೇಲೆ ಕುಳಿತು ಮರಿ ಮಾಡುತ್ತಿದ್ದೆ, ಬಾತುಕೋಳಿ ಅದನ್ನು ಮಾಡಬಹುದಾದರೆ ನಾನೇತಕ್ಕೆ ಮಾಡಕೂಡದು?'—ಎಂದುಬಿಟ್ಟ."

"ಹಾಗೇನು? ಅಂಥ ಪ್ರಶ್ನೆಗಳಿಗೆ ಉತ್ತರ ಹೇಳುವುದಂತೂ ಕಷ್ಟವೇ ಸರಿ!"

"ಇನ್ನೊಂದು ಸಲ ಜೇನಿನ ಗೂಡಿನಲ್ಲಿ ಜೇನುಗಳು ಹೇಗೆ ಕೆಲಸ ಮಾಡುತ್ತವೆಂದು ಕೇಳಿ, ಗೂಡನ್ನು ನೋಡುವುದಕ್ಕೆ ಹತ್ತಿರ ಹೋದನು. ಮಾರನೆಯ ನಿಮಿಷವೇ ಒಂದು ಕೋಲಿನಿಂದ ಗೂಡನ್ನು ಕೆದಕಿದನು. ಅಷ್ಟು ಹೊತ್ತಿಗೆ ಸರಿಯಾಗಿ ಒಂದು ಆಡು ಇವನನ್ನು ಗೂಡಿನ ಮೇಲೆ ದಬ್ಬಿತು. ಜೇನುಗಳು ಇವನ ಮುಖವನ್ನೆಲ್ಲಾ ಕಡಿದವು. ಆಗ ನೋಡಬೇಕಾಗಿತ್ತು, ಆ ಮುದ್ದುಮುಖವನ್ನು!"

ಕ್ಯಾಪ್ಟನನು : "ಅಂತು ಈ ಹುಡುಗ ಮುಂದಕ್ಕೆ ಬರುತ್ತಾನೆ. ವಿಷಯಗಳನ್ನು ತಿಳಿಯುವ ಆಸಕ್ತಿ ಎನ್ನುವುದು ಒಳ್ಳೆಯದು" ಎಂದನು.

"ಒಳ್ಳೆಯದೇನೋ ನಿಜ. ಅದರಿಂದ ಬೇರೆ ಯಾರಿಗೂ ತೊಂದರೆಯಿಲ್ಲ.

ಒಂದೊಂದು ಸಲ ಅವನಿಗೂ ಅವನ ಬಟ್ಟೆಗಳಿಗೂ ಮಾತ್ರ ತೊಂದರೆ."

—ಮಾತುಕತೆ ಹೀಗೆ ನಡೆಯುತ್ತಿದ್ದಾಗ ಸ್ಯಾಮ್ಯುಯೆಲನು ಒಂದು ಸಲ ಬಲವಾಗಿ ಸೀನಿದನು. ಅನಂತರ ಅವನು ಕ್ಯಾಪ್ಟನೊಡನೆ, "ಹೊಗೆಯ ವಾಸನೆ ಬರುತ್ತಿದೆಯಲ್ಲವೆ ?" ಎಂದನು.

ಕ್ಯಾಪ್ಟನನು : "ಅಗೋ, ಅಲ್ಲಿ ನೋಡು ! ಎಷ್ಟು ದೊಡ್ಡ ಉರಿ !" ಎಂದು ಬೀದಿಯ ಕಡೆಗೆ ಬೆರಳು ತೋರಿಸಿದನು.

"ಹೊಲದ ಕಡೆಯಿಂದ ಹೊಗೆ ಬರುತ್ತಿದೆ. ಅಗೊ ! ಯಥಾಪ್ರಕಾರ ಆಲ್ ಆ ಕಡೆಯಿಂದಲೇ ಬರುತ್ತಿದ್ದಾನೆ. ಈ ಸಲ ಏನು ತಂಟೆ ಮಾಡಿದ್ದಾನೊ ?"

ಆಲ್ ಓಡುತ್ತ ಓಡುತ್ತ ಹತ್ತಿರ ಬಂದನು. ಅವನನ್ನು ಅಟ್ಟಿಸಿಕೊಂಡು ಬರುತ್ತಿದ್ದ ರೈತನಿಗಂತು ಬಹಳ ಕೋಪ ಬಂದಿದ್ದಂತೆ ಕಂಡಿತು. ರೈತನು ಆಲನ ಸಮೀಪಕ್ಕೆ ಬಂದಾಗ :

"ಹುಲ್ಲು ಬಣಬೆಗೆ ಏಕಯ್ಯಾ ಬೆಂಕಿ ಹಾಕಿದ್ದೀ ? ಸುಮ್ಮನೆ ಬಿಟ್ಟು ಬಿಡುವೆನೇನು ?" ಎಂದನು.

"ಏನಾಗುವುದೋ ನೋಡಬೇಕೆಂದಿದ್ದೆ."

"ಏನಾಗುವುದೋ ತೋರಿಸುತ್ತೇನೆ, ಬಾ."

ರೈತನು ಆ ಆರು ವರ್ಷದ ತುಂಟ ಹುಡುಗನನ್ನು ರಸ್ತೆಗೆ ಎಳದು ಕೊಂಡು ಹೋಗಿ ಬಲವಾದ ನಾಲ್ಕು ಗುದ್ದುಗಳನ್ನು ಕೊಟ್ಟನು.

ಮಾರನೆಯ ವರ್ಷ ಸ್ಯಾಮ್ಯುಯೆಲ್ ಎಡಿಸನ್ನನು ತನ್ನ ಕುಟುಂಬ ದೊಡನೆ ಮಿಲಾ್ ನಗರದಿಂದ ಪೋರ್ಟ್ ಹ್ಯೂರಾನ್ ಎಂಬ ಊರಿಗೆ ಹೋಗಿ ನೆಲಸಿದನು. ಅಲ್ಲಿ ಅವರ ಮನೆ ಬಹಳ ದೊಡ್ಡದಾಗಿದ್ದಿತು. ಆ ಮನೆಯಲ್ಲಿ ಒಂದು ಬಹು ಪುಟ್ಟ ಕೊಟಡಿ. ಆಲನಿಗೆ ಅದೇ ಸಂಶೋಧ ನಾಲಯವಾಯಿತು. ಆಲನ ತಂದೆಯು ಮನೆಯ ಕೆಲಸಗಳನ್ನು ನೋಡಿ ಕೊಳ್ಳುವುದಕ್ಕೆಂದು ಮೈಕೇಲ್ ಓಟ್ಸ್ ಎಂಬೊಬ್ಬನನ್ನು ಕೆಲಸಕ್ಕೆ ನೇಮಿಸಿ ಕೊಂಡನು. ಸ್ವಲ್ಪ ದಿನಗಳೊಳಗೇ ಮೈಕೇಲ್ ಮತ್ತು ಆಲ್ ಇವರಲ್ಲಿ ಬಹಳ ಸ್ನೇಹ ಬೆಳೆಯಿತು. ಇಬ್ಬರು ಬಾಲಕರೂ ಒಬ್ಬರನ್ನೊಬ್ಬರು ಅಗಲಿ ರದೆ ಸದಾ ಒಟ್ಟಿಗಿರುತ್ತಿದ್ದರು.

ಆಲನಿಗೆ ಹಣ ಸಂಪಾದಿಸಬೇಕೆಂದು ಮನಸ್ಸಾಯಿತು. ಅವರ ಮನೆಯ ಸುತ್ತಲೂ ವಿಶಾಲವಾದ ಸ್ಥಳವಿದ್ದುದರಿಂದ ಅವನ ತಂದೆ ಆ ಜಾಗದಲ್ಲಿ ಹಣ್ಣುಹಂಪಲು ಮತ್ತು ತರಕಾರಿ ಗಿಡಗಳನ್ನು ಹಾಕಿಸಿದ್ದರು. ಆಲ್ ಮತ್ತು ಮೈಕೇಲ್ ಓಟ್ಸ್ ಇವರಿಬ್ಬರೂ ಸ್ಯಾಮ್ಯುಯೆಲನ ಗಾಡಿಯಲ್ಲಿ ಆ ಹಣ್ಣುಗಳನ್ನು ತುಂಬಿಕೊಂಡು ಮನೆಯಿಂದ ಮನೆಗೆ ಹೋಗಿ ಮಾರಾಟ ಮಾಡಿದರು. ಆ ಕೆಲಸದಿಂದ ಆ ಇಬ್ಬರು ಹುಡುಗರೂ ಒಂದು ವರ್ಷದಲ್ಲಿ 150 ಪೌಂಡುಗಳ ಲಾಭ ಸಂಪಾದಿಸಿದರು.

ಆದರೆ ಆಲನಿಗೆ ಎಲ್ಲಕ್ಕಿಂತ ಹೆಚ್ಚಾಗಿ ರಸಾಯನ ಶಾಸ್ತ್ರದಲ್ಲಿ ಆಸಕ್ತಿ ಇದ್ದಿತು; ಆ ಶಾಸ್ತ್ರಕ್ಕೆ ಸಂಬಂಧಿಸಿದ ಹಲವು ಪುಸ್ತಕಗಳನ್ನು ಅವನು ಮೊದಲು ಕೊಂಡುಕೊಂಡನು. ಅನಂತರ ತನ್ನ ಹತ್ತನೆಯ ವಯಸ್ಸಿನಲ್ಲಿ ಅವನು ತನ್ನ ಮನೆಯಲ್ಲಿ ಒಂದು ಪ್ರಯೋಗ ಶಾಲೆಯನ್ನು ಪ್ರಾರಂಭಿಸಿದನು. ಅನೇಕ ಸ್ಥಳಗಳಲ್ಲಿ ಹುಡುಕಾಡಿ ಸುಮಾರು ಇನ್ನೂರು ಗಾಜಿನ ಸೀಸೆಗಳನ್ನು ಶೇಖರಿಸಿದನು. ಆ ಮೇಲೆ ಯಾವಯಾವ ರಾಸಾಯನಿಕ ವಸ್ತುಗಳನ್ನು ಕೊಂಡುಕೊಳ್ಳುವುದಕ್ಕೆ ಸಾಧ್ಯವಿದ್ದಿತೋ ಅವುಗಳನ್ನೆಲ್ಲಾ ಕೊಂಡು, ಒಂದೊಂದನ್ನೂ ಒಂದೊಂದು ಸೀಸೆಯಲ್ಲಿ ಹಾಕಿ, ಯಾರೂ ಅದನ್ನು ಮುಟ್ಟದಿರುವುದಕ್ಕಾಗಿ 'ವಿಷಪದಾರ್ಥ' ಎಂದು ಪ್ರತಿಯೊಂದರ ಮೇಲೂ ಚೀಟಿಯನ್ನು ಅಂಟಿಸಿದನು.

ಅನಂತರ ಪ್ರಯೋಗಗಳನ್ನು ನಡೆಯಿಸುವುದಕ್ಕೆ ಪ್ರಾರಂಭಿಸಿದನು. ಹಬೆಯ ಸಹಾಯದಿಂದ ರಬ್ಬರಿನ ಚಂಡುಗಳು ಆಕಾಶದಲ್ಲಿ ಹಾರುವುವೆಂದು ಅವನು ಒಂದು ವಿಜ್ಞಾನದ ಪುಸ್ತಕದಲ್ಲಿ ಓದಿದ್ದನು. ಹಾಗಿದ್ದರೆ 'ಒಬ್ಬ ಮನುಷ್ಯನಿಗೂ ಹಬೆ ತುಂಬಿದರೆ ಅವನೂ ಏಕೆ ಹಾರಬಾರದೆ'ಂದು ಆಲ್ ಆಲೋಚಿಸಿದನು. ಕೂಡಲೆ ಅವನು ತನ್ನ ಸೀಸೆಗಳನ್ನೆಲ್ಲಾ ನೋಡಿ ಒಂದರಿಂದ ಬಹಳ ಹಬೆ ಹೊರಡುವ ಒಂದು ರಾಸಾಯನಿಕ ವಸ್ತುವನ್ನು ತೆಗೆದನು. 'ಸೀಡ್ಲಿಟ್ಸ್' ಪುಡಿಯೇ ಅವನು ಆರಿಸಿದ ವಸ್ತು. ಅದು ಬಹಳ ಹಬೆ ಹೊರಡಿಸತಕ್ಕ ಒಂದು ಔಷಧ ಸಾಮುಗ್ರಿ. ಅದನ್ನು ತೆಗೆದವನೇ ಆಲ್ ಅದನ್ನು ನುಂಗೆಂದು ಮೈಕೇಲ್ ಓಟ್ಸನಿಗೆ ಹೇಳಿದನು. ಓಟ್ಸನು ತನ್ನ ಯಜಮಾನನು ಹೇಳಿದುದನ್ನು ಚಾಚೂ ತಪ್ಪದೆ ನಡೆಯಿಸಿಬಿಡುತ್ತಿದ್ದನು. ಅದ

ರಂತೆ ಅವನು ಆ ಔಷಧವನ್ನು ಹಿಂದೆ ಮುಂದೆ ನೋಡದೆ ನುಂಗಿದನು. ಔಷಧವು ಬಹಳ ಕೆಟ್ಟ ವಾಸನೆಯದಾಗಿದ್ದಿತು. ಓಟ್ಸನು ಮೇಲಕ್ಕೆ ಹಾರುತ್ತಾನೇನೋ ಎಂದು ಆಲ್ ರೆಪ್ಪೆ ಹಾಕದೆ ನೋಡುತ್ತಿದ್ದನು. ಓಟ್ಸನು ಹಾರುವುದಕ್ಕೆ ಬದಲಾಗಿ ನೆಲದ ಮೇಲೆ ಕುಳಿತುಬಿಟ್ಟು ಹೊಟ್ಟೆಯನ್ನು ಅದುಮಿಕೊಳ್ಳುತ್ತಾ ಬಲವಾಗಿ ಅರಚುವುದಕ್ಕೆ ಪ್ರಾರಂಭಿಸಿದನು.

ಶಬ್ದವನ್ನು ಕೇಳಿ ಆಲನ ತಂದೆಯು ಒಂದು ಬೆತ್ತವನ್ನು ತೆಗೆದುಕೊಂಡು ಬಂದು ಇಬ್ಬರಿಗೂ ಬಲವಾದ ಎರಡೆರಡು ಏಟುಗಳನ್ನು ಕೊಟ್ಟರು !

ಬಾಲ್ಯದಲ್ಲಿ ಆಲನೂ ಎಲ್ಲ ಮಕ್ಕಳಂತೆಯೇ ಶಾಲೆಗೆ ಸೇರಿದನು. ಆದರೆ ಅಲ್ಲಿ ಈ ಹುಡುಗನು ಪಾಠಕ್ಕೆ ಸ್ವಲ್ಪವೂ ಗಮನ ಕೊಡದೆ 'ಸ್ಲೇಟಿ'ನ ಮೇಲೆ ಯಾವುದಾದರೂ ಚಿತ್ರವನ್ನು ಬಿಡಿಸುತ್ತ ಕಾಲ ಕಳೆಯುತ್ತಿದ್ದನು. ಉಪಾಧ್ಯಾಯರು ಕೇಳಿದ ಯಾವ ಪ್ರಶ್ನೆಗೂ ಆಲನಿಗೆ ಉತ್ತರವೇ ಹೊಳೆಯುತ್ತಿರಲಿಲ್ಲ. ಅನೇಕ ಸಲ ಉತ್ತರ ತಿಳಿಯದೆಂದೇ ಹೇಳಿಬಿಡುತ್ತಿದ್ದನು. ಕಡೆಗೆ, ಉಪಾಧ್ಯಾಯರಿಗೆ ಬಹಳ ಬೇಸರವಾಗಿ, ಆಲನು ದಡ್ಡನೆಂದು ಹೇಳಿ ಮನೆಗೆ ಕಳುಹಿಸಿಬಿಟ್ಟರು. ಮನೆಗೆ ಬಂದು ಆಲನು ತಾನು ಇನ್ನು ಮುಂದೆ ಶಾಲೆಗೆ ಹೋಗುವುದಿಲ್ಲವೆಂದು ತಾಯಿಯ ಹತ್ತಿರ ಹೇಳಿದನು. ಅದರಂತೆ ಅಂದಿನಿಂದ ಅವನು ಪಾಠಶಾಲೆಗೇ ಹೋಗಲಿಲ್ಲ. ಅವನ ತಾಯಿಯೇ ಅವನಿಗೆ ವಿದ್ಯಾ ಗುರುವಾದಳು. ಮುಂದೆ ವಿದ್ಯೆಯಲ್ಲಿ ಅವನಿಗೆ ವಿಶೇಷ ಆಸಕ್ತಿ ಹುಟ್ಟಿ, ಆ ಊರಿನ ಪುಸ್ತಕಭಂಡಾರದಲ್ಲಿದ್ದ ಪ್ರತಿಯೊಂದು ಪುಸ್ತಕವನ್ನೂ ಓದುವುದಕ್ಕೆ ಮನಸ್ಸುಮಾಡಿದನು.

ಹನ್ನೆರಡು ವರ್ಷ ವಯಸ್ಸು ತುಂಬುವುದರೊಳಗೆ ಅವನು ಅಮೇರಿಕಾದಲ್ಲೆಲ್ಲಾ ಪ್ರಾಯಶಃ ಅತ್ಯಂತ ಬುದ್ಧಿವಂತನಾದ ಹುಡುಗನಾಗಿದ್ದನು. ಆ ವೇಳೆಗಾಗಲೇ ತಾನು ಸ್ವಂತವಾಗಿ ಸಂಪಾದನೆ ಮಾಡಬೇಕಾದ ಕಾಲವು ಬಂದಿತೆಂದು ಆ ಹುಡುಗನು ಭಾವಿಸಿದನು. ಪುಸ್ತಗಳನ್ನು ಕೊಂಡುಕೊಳ್ಳುವುದಕ್ಕೂ, ರಾಸಾಯನಿಕ ವಸ್ತುಗಳನ್ನು ಕೊಂಡುಕೊಳ್ಳುವುದಕ್ಕೂ ಅವನಿಗೆ ಬಹಳ ಹಣ ಬೇಕೆನ್ನಿಸಿತು. ಅದರಂತೆ ಅವನು, ತಾನೊಂದು ನೌಕರಿಯನ್ನು ಸಂಪಾದಿಸಿಕೊಳ್ಳುವೆನೆಂದು, ತಂದೆಗೆ ತಿಳಿಸಿದನು. ತಂದೆಯು ಬಡವನಾಗಿರಲಿಲ್ಲ. ಆದುದರಿಂದ ಆಲ್ ಸಂಪಾದನೆ ಮಾಡುವುದಕ್ಕೆ ಅಷ್ಟು ಚಿಕ್ಕ

ವಯಸ್ಸಿನಲ್ಲಿ ಪ್ರಯತ್ನ ಪಡಬೇಕಾದುದೇನೂ ಆವಶ್ಯಕವಿರಲಿಲ್ಲ. ತಂದೆಯು ಅವನ ಅಭಿಪ್ರಾಯವನ್ನೊಪ್ಪದೆ ಬಹಳ ಬುದ್ಧಿವಾದವನ್ನು ಹೇಳಿದನು. ಆದರೆ ಆ ಪುಟ್ಟ ಹುಡುಗನು ತನ್ನ ತೀರ್ಮಾನವನ್ನು ಬದಲಾಯಿಸಲಿಲ್ಲ. ಕೊನೆಗೆ ತಂದೆ ತಾಯಿಗಳಿಬ್ಬರೂ ಅವನಿಗೆ ಯಾವುದು ಸರಿಯೆಂದು ತೋರುತ್ತದೋ ಆ ರೀತಿ ಮಾಡಲೆಂದು ಸುಮ್ಮನಾದರು.

ಅಲ್ಲಿಂದ ಮುಂದೆ ನಾಲ್ಕು ವರ್ಷಗಳ ಕಾಲ ಆಲನು ಪೋರ್ಟ್ ಹ್ಯೂರಾನ್ ಮತ್ತು ಡೆಟ್ರಾಯಿಟ್ ನಗರಗಳ ಮಧ್ಯೆ ಓಡಾಡುವ ರೈಲುಗಳಲ್ಲಿ ವೃತ್ತಪತ್ರಿಕೆ, ಹಣ್ಣುಹಂಪಲು ಮೊದಲಾದುವುಗಳನ್ನು ಮಾರುವುದಕ್ಕೆ ಪ್ರಾರಂಭಿಸಿದನು. ಆ ಎರಡು ನಗರಗಳ ದೂರ ಎಪ್ಪತ್ತು ಮೈಲಿಗಳು. ಅಷ್ಟು ದೂರವೂ ಆ ಸಣ್ಣ ಹುಡುಗನು ರೈಲಿನಲ್ಲಿ ಪ್ರಯಾಣ ಮಾಡುತ್ತಾ ತನ್ನ ವ್ಯಾಪಾರವನ್ನು ಸಾಗಿಸುತ್ತಿದ್ದನು. ಆ ಕಾಲದಲ್ಲಿ ಥಾಮಸ್ ಆಲ್ವಾ ಎಡಿಸನ್ನನು ರೈಲಿನಲ್ಲಿ ತನ್ನ ಜೊತೆಗೆ ಹಲವು ಪುಸ್ತಕಗಳನ್ನೂ ತೆಗೆದು ಕೊಂಡು ಹೋಗುತ್ತಿದ್ದನು. ಅಲ್ಲದೆ, ರೈಲ್ವೆ ಕಂಪನಿಯವರಿಂದ ಅನುಮತಿಯನ್ನು ಪಡೆದುಕೊಂಡು ರೈಲುಗಾಡಿಯಲ್ಲೇ ಒಂದು ಸಣ್ಣ ಪ್ರಯೋಗ ಶಾಲೆಯನ್ನು ಇಟ್ಟುಕೊಂಡು ತನ್ನ ಸಂಶೋಧನೆಗಳನ್ನು ನಡೆಯಿಸುತ್ತಲೇ ಇದ್ದನು. ಅನೇಕ ಸಲ ಅವನು ರೈಲಿನ ಪ್ರಯಾಣಿಕರಿಗೆಲ್ಲಾ ವೃತ್ತಪತ್ರಿಕೆಗಳನ್ನೂ ಹಣ್ಣುಗಳನ್ನೂ ಬಿಕರಿಮಾಡಿದ ಮೇಲೆ ತನ್ನ ಪ್ರಯೋಗ ಶಾಲೆಗೆ ಹೋಗಿ ಪ್ರಯೋಗಗನ್ನು ನಡೆಯಿಸುತ್ತಲೋ, ವಿಜ್ಞಾನದ ಪುಸ್ತಕಗಳನ್ನು ಏಕಾಗ್ರಚಿತ್ತದಿಂದ ಓದುತ್ತಲೋ ಕುಳಿತುಕೊಳ್ಳುತ್ತಿದ್ದನು.

ಡೆಟ್ರಾಯಿಟ್ ನಗರದಲ್ಲಿ ರೈಲು ನಿಂತಕೂಡಲೆ, ರೈಲಿನಿಂದಿಳಿದು ಆಲ್ ಸ್ವಲ್ಪವೂ ಕಾಲವಿಳಂಬ ಮಾಡದೆ ಆ ಊರಿನ ಸಾರ್ವಜನಿಕ ಪುಸ್ತಕ ಭಂಡಾರಕ್ಕೆ ಹೋಗುವನು. ರೈಲು ಪುನಃ ವಾಪಸು ಹೊರಡುವ ವರೆಗೆ ಮಧ್ಯಾಹ್ನದ ಹೊತ್ತೆಲ್ಲಾ ಅವನು ಪುಸ್ತಕಭಂಡಾರದಲ್ಲಿ ಪುಸ್ತಕಗಳನ್ನು ಓದುತ್ತಿದ್ದನು. ರೈಲಿನಲ್ಲಿ ವಾಪಸು ಬಂದ ಕೂಡಲೆ ಮನೆಗೆ ನಡೆದುಕೊಂಡು ಹೋಗುವುದರಲ್ಲಿ ಕಾಲ ವ್ಯಯವಾಗುವುದೆಂದು ರೈಲ್ವೆ ನಿಲ್ದಾಣಕ್ಕೆ ಕುದುರೆಯನ್ನೂ ಗಾಡಿಯನ್ನೂ ಓಟ್ಸನು ತರುವಂತೆ ಏರ್ಪಾಟು ಮಾಡಿರುತ್ತಿದ್ದನು. ಓಟ್ಸನಂತೂ ಆಲನು ಅಪ್ಪಣೆ ಕೊಟ್ಟುದನ್ನು ಸ್ವಲ್ಪವೂ ಮೀರದೆ ಗಾಡಿಯನ್ನು

ಸಿದ್ಧವಾಗಿ ತಂದಿರುತ್ತಿದ್ದನು.

ಸ್ವಲ್ಪ ಕಾಲದೊಳಗಾಗಿ ಎಡಿಸನ್ನನು ಡೆಟ್ರಾಯಿಟ್ ಮತ್ತು ಇತರ ಕೆಲವು ಊರುಗಳಲ್ಲಿ ತನ್ನ ಪತ್ರಿಕೆಯನ್ನೂ, ಹಣ್ಣು ಹಂಪಲುಗಳನ್ನೂ ಮಾರುವುದಕ್ಕೆ ಬೇರೆ ಹುಡುಗರನ್ನು ನೇಮಕಮಾಡಿದನು. ಅದರಿಂದ ಅವನಿಗೆ ಬಹಳ ಹಣ ಲಾಭ ಬಂದಿತು.

ಒಂದು ದಿನ ಡೆಟ್ರಾಯಿಟ್ ನಗರದಲ್ಲಿ ಎಡಿಸನ್ ಒಂದು ಪುಟ್ಟ ಅಚ್ಚಿನ ಯಂತ್ರವನ್ನು ನೋಡಿದನು. ಅದು ಹಳೆಯ ಯಂತ್ರವಾಗಿದ್ದುದರಿಂದ ಸುಲಭ ಬೆಲೆಗೆ ದೊರೆಯುವುದಾಗಿದ್ದಿತು. ಅದನ್ನು ಕೊಂಡುಕೊಂಡು, ಎಡಿಸನ್ ಅದನ್ನು ರೈಲಿನಲ್ಲಿದ್ದ ತನ್ನ ಪ್ರಯೋಗಶಾಲೆಯಲ್ಲಿ ಇಡಿಸಿದನು. ಸ್ವಲ್ಪ ಕಾಲದಲ್ಲೇ ಮುದ್ರಣಯಂತ್ರದ ಸಹಾಯದಿಂದ ಅವನು 'ವೀಕ್ಲಿ ಹೆರಾಲ್ಡ್' ಎಂಬ ಸ್ವಂತ ಪತ್ರಿಕೆಯನ್ನು ಹೊರಡಿಸುವುದಕ್ಕೆ ಪ್ರಾರಂಭಿಸಿದನು. ಪತ್ರಿಕೆಯಲ್ಲಿ ಪ್ರಾಯಶಃ ಎಲ್ಲಾ ಲೇಖನಗಳನ್ನೂ ತಾನೇ ಬರೆಯುತ್ತಿದ್ದನು. ತಂತಿ ಕಚೇರಿಯಲ್ಲಿದ್ದ ಕೆಲವರು ನೌಕರರನ್ನು ಸ್ನೇಹಮಾಡಿಕೊಂಡು ಎಡಿಸನ್ ಅವರ ಮೂಲಕ ಸ್ಥಳದ ವರ್ತಮಾನಗಳನ್ನು ಸಂಗ್ರಹಿಸಿ ಆ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದನು. ತಿಂಗಳಿಗೆ ಪತ್ರಿಕೆಯ ನಾನ್ನೂರು ಪತ್ರಿಗಳು ಬಿಕರಿಯಾಗುತ್ತಿದ್ದವು.

ಆದರೆ ಹದಿನೈದು ವರ್ಷ ವಯಸ್ಸಾಗುವ ವೇಳೆಗೆ ಎಡಿಸನ್ನನ ಅದೃಷ್ಟ ಬದಲಾಯಿಸಿತು. ಆ ವರೆಗೆ ಎಲ್ಲವೂ ಸುಸೂತ್ರವಾಗಿ ನಡೆದುಕೊಂಡು ಬಂದಿದ್ದಿತು. ಒಂದು ದಿನ ರೈಲಿನಲ್ಲಿ ಅವನು ಪತ್ರಿಕೆಗಳನ್ನು ಅಚ್ಚು ಮಾಡಿಸುತ್ತಿದ್ದಾಗ, ರೈಲು ಕುಲುಕಿದಂತಾಗಿ ಅವನ ಪ್ರಯೋಗ ಶಾಲೆಯಲ್ಲಿದ್ದ ರಂಜಕದ ತುಂಡೊಂದು ಕೆಳಕ್ಕೆ ಬಿದ್ದು ಹತ್ತಿ ಉರಿಯಲಾರಂಭಿಸಿತು. ಉರಿಯನ್ನು ಆರಿಸುವುದಕ್ಕೆ ಎಡಿಸನ್ ಪ್ರಯತ್ನಪಟ್ಟುದು ವ್ಯರ್ಥವಾಯಿತು. ಉರಿಯು ಹಬ್ಬುತ್ತ ಬಂದಿತು. ರೈಲಿನ ಕಂಡಕ್ಟರನು ಬಂದು ಉರಿಯನ್ನಾರಿಸಿ, ಎಡಿಸನ್ನನನ್ನು ಮನಸ್ವೀ ಬೈದನು. ಅಷ್ಟೇ ಅಲ್ಲದೆ, ರೈಲು ಡೆಟ್ರಾಯಿಟ್ ನಗರಕ್ಕೆ ಬಂದಾಗ, ಅವನ ಮುದ್ರಣ ಯಂತ್ರವನ್ನೂ ಪ್ರಯೋಗಶಾಲೆಯ ವಸ್ತುಗಳನ್ನೂ ಸಹ ಆತನು ಹೊರಕ್ಕೆ ಎಸೆದುಬಿಟ್ಟನು. ಅಲ್ಲಿಗೆ ಆ ಮುದ್ರಣಶಾಲೆಯ ಮತ್ತು ಪ್ರಯೋಗಶಾಲೆಯ ಕೆಲಸಗಳು ಮುಕ್ತಾಯವಾದುವು.

ಒಂದು ದಿನ ಎಡಿಸನ್ ತಂತಿ ಕಚೇರಿಯಲ್ಲಿದ್ದ ತನ್ನ ಸ್ನೇಹಿತನೊಬ್ಬ ನೊಡನೆ ಮಾತನಾಡುತ್ತಿದ್ದನು. ಆ ಸ್ನೇಹಿತನ ಹೆಸರು ಮೆಕೆಂಜಿ ಎಂದು. ಅವರಿಬ್ಬರೂ ಮಾತನಾಡುತ್ತ ನಿಂತಿದ್ದ ಸ್ಥಳವು ಒಂದು ರೈಲ್ವೆ ನಿಲ್ದಾಣ. ಆಗ ತಾನೇ ರೈಲು ಹೊರಡುವುದಕ್ಕೆ ಸಿದ್ಧವಾಗುವುದಕ್ಕಾಗಿ ಗಾಡಿಗಳನ್ನು ಒಂದ ಕ್ಕೊಂದಕ್ಕೆ ಜೋಡಿಸುವ ಕೆಲಸವು ನಡೆಯುತ್ತಿದ್ದಿತು. ಆಗ ಒಂದು ದೊಡ್ಡ ಶಬ್ದವಾಯಿತು. ಅದೇನೆಂದು ಎಡಿಸನ್ ತಿರುಗಿ ನೋಡುವ ವೇಳೆಗೆ, ಮೆಕೆಂಜಿಯ ಪುಟ್ಟ ಮಗುವು ಒಂದು 'ಎಂಜಿನು' ಬರುತ್ತಿದ್ದ ಮಾರ್ಗದಲ್ಲಿದ್ದುದನ್ನು ಅವನು ನೋಡಿದನು. ಕೂಡಲೆ ಎಡಿಸನ್ ಹಿಂದು ಮುಂದು ನೋಡದೆ ಒಂದೇ ಹಾರಿಗೆ ರೈಲ್ವೆ ಲೈನಿಗೆ ನುಗ್ಗಿ, ಆ ಮಗುವನ್ನು ಎಳೆದುಕೊಂಡು, ಎಂಜಿನಿಗೆ ದಾರಿ ಮಾಡಿಕೊಟ್ಟನು. ಆದರೆ ಅಷ್ಟರಲ್ಲೇ ಪಕ್ಕದಲ್ಲಿ ರಭಸದಿಂದ ಹಾದುಹೋದ ಆ 'ಇಂಜಿನು' ಎಡಿಸನ್ನನ ಕಿವಿಯನ್ನು ಕಿತ್ತುಕೊಂಡು ಹೋಯಿತು. ಎಡಿಸನ್ನ ನಿಗಾದ ಗಾಯಕ್ಕೆ ಔಷಧೋಪಚಾರ ನಡೆಯಿಸಿದುದಾಯಿತು.

ಎಡಿಸನ್ನನಿಗೆ ಯಾವ ರೀತಿ ಪ್ರತ್ಯುಪಕಾರ ಮಾಡಬೇಕೆಂಬುದು ಮೆಕೆಂಜಿಗೆ ತೋಚದಾಯಿತು. ಮಾರನೆಯ ದಿನ ಮೆಕೆಂಜಿಯನ್ನು ಅವನು ಕಂಡಾಗ, ಎಡಿಸನ್ನನಿಗೆ ತಂತಿಯನ್ನು ಕಳುಹಿಸುವುದನ್ನು ಕಲಿಸಿಕೊಡು ವುದಾಗಿಯೂ, ರೈಲ್ವೆಯಲ್ಲಿ ಅವನಿಗೆ ನೌಕರಿಯನ್ನು ಕೊಡಿಸುವುದಕ್ಕೆ ಪ್ರಯತ್ನಿಸುವುದಾಗಿಯೂ ಮೆಕೆಂಜಿ ಹೇಳಿದನು. ಮುಂದಿನ ತಿಂಗಳೆಲ್ಲಾ ಎಡಿಸನ್ ತಂತಿಯ ಕೆಲಸವನ್ನು ಕಲಿತು, ಕ್ರಮೇಣ 'ಟೆಲಿಗ್ರಾಫಿಸ್ಟ್' ಕೆಲಸ ವನ್ನು ಅವಲಂಬಿಸಿದನು. ಅಲ್ಲಿಂದ ಮುಂದೆ ವ್ಯಾಪಾರದ ಕಸಬನ್ನು ಬಿಟ್ಟು ಬಿಟ್ಟನು.

ಮುಂದೆ ಐದು ವರ್ಷಗಳ ಕಾಲ, ಥಾಮಸ್ ಎಡಿಸನ್ನನು ಅಮೆರಿಕದ ಸಂಯುಕ್ತ ಸಂಸ್ಥಾನಗಳ ಬೇರೆ ಬೇರೆ ಸ್ಥಳಗಳಲ್ಲಿ 'ಟೆಲಿಗ್ರಾಫ್ ಆಪರೇಟರಾ'ಗಿ ಕೆಲಸ ಮಾಡಿದನು. ಆ ಕಾಲದಲ್ಲಿ ಅವನು ತನ್ನ ನೌಕರಿಯಲ್ಲಿ ಸಾಮಾನ್ಯ ವಾಗಿ ರಾತ್ರಿ ಸರದಿಯಲ್ಲಿ ಕೆಲಸ ಮಾಡುತ್ತಿದ್ದನು. ಹೀಗೆ ಮಾಡುತ್ತಿದ್ದುದ ರಿಂದ ಅವನಿಗೆ ಹಗಲು ಹೊತ್ತು ಪ್ರಯೋಗ ಪರಿಶೀಲನೆಗಳನ್ನು ನಡೆಯಿಸು ವುದಕ್ಕೆ ಕಾಲಾವಕಾಶ ಸಿಗುತ್ತಿದ್ದಿತು. ಒಂದು ದಿನ ಅವನು ಒಂದು ಪೆಟ್ಟಿಗೆ ಯನ್ನು ಹೊತ್ತುಕೊಂಡು 'ಟೆಲಿಗ್ರಾಫ್ ಕಚೇರಿ' ಯೊಳಕ್ಕೆ ಬಂದನು.

ಬಂದವನೇ "ಇದರಿಂದಲೂ ಏನೂ ಆಗಲಾರದು, ಇರಲಿ ನೋಡೋಣ" ಎಂದುಕೊಂಡು ಅದನ್ನು ಒಂದು ಅಗ್ಗಿಷ್ಟಿಕೆಯ ಮೇಲಿಟ್ಟನು. ಅಗ್ಗಿಷ್ಟಿಕೆಯು ಹೊತ್ತಿರಲಿಲ್ಲ. ಅನಂತರ ಅವನಿಗೆ ಅದರ ವಿಚಾರವೇ ಪೂರ್ತಿ ಮರೆತು ಹೋಯಿತು. ಪುನಃ ಅಗ್ಗಿಷ್ಟಿಕೆಯನ್ನು ಹೊತ್ತಿಸಿದಾಗ ಒಂದು ಭಾರಿ ಸ್ಫೋಟನೆ ಕೇಳಿಸಿತು. ಸ್ಫೋಟಕವನ್ನು ಅಥವಾ ಮದ್ದಿನಹತ್ತಿಯನ್ನು ಕಂಡುಹಿಡಿಯ ಬೇಕೆಂದು ಎಡಿರ್ಸ ಪ್ರಯತ್ನಿಸುತ್ತಿದ್ದು ಅಕಸ್ಮಾತ್ತಾಗಿ ಈ ರೀತಿ ಅದನ್ನು ಕಂಡುಹಿಡಿದನು !

ಎಡಿರ್ಸ ಕೆಲಸಮಾಡುತ್ತಿದ್ದ ಟೆಲಿಗ್ರಾಫ್ ಆಫೀಸಿನ ಮೇಜಿನ ಮೇಲೆ ಅವನು ಒಮ್ಮೊಮ್ಮೆ ತಿಂಡಿಯನ್ನಿಡುತ್ತಿದ್ದನು. ಆಗ ಜಿರಳೆಗಳು ನೆಲದ ಕಡೆ ಯಿಂದ ಮೇಜಿನ ಮೇಲಕ್ಕೆ ಹತ್ತಿ, ತಿಂಡಿಯನ್ನು ಮುತ್ತುತ್ತಿದ್ದುವು. ಅದಕ್ಕಾಗಿ ಎಡಿರ್ಸ ಮೇಜಿನ ಅಂಚಿನ ಸುತ್ತಲೂ ಎರಡು ತಂತಿಗಳ ಎಳೆಗಳನ್ನು ಸುತ್ತಿ ಅವುಗಳನ್ನೂ ಒಂದು ಬ್ಯಾಟರಿಯನ್ನೂ ತಂತಿಯ ಮೂಲಕ ಸೇರಿಸಿದನು. ಜಿರಳೆಗಳು ತಂತಿಯನ್ನು ದಾಟುವುದಕ್ಕೆ ಬಂದಾಗ ಅಲ್ಲಲ್ಲೇ ಸತ್ತು ಬೀಳುತ್ತಿದ್ದುವು.

ಕೊನೆಗೆ ಕೆಲವರು ಸ್ನೇಹಿತರು ನ್ಯೂಯಾರ್ಕಿಗೆ ಹೋಗೆಂದು ಎಡಿಸನ್ನನಿಗೆ ಸಲಹೆ ಕೊಟ್ಟರು. ಅಲ್ಲಿಗೆ ಹೋದಾಗ ಎಡಿಸನ್ನನ ಬಳಿ ಒಂದು ಪುಡಿಕಾಸೂ ಇರಲಿಲ್ಲ. ಒಂದು ಬಟ್ಟಲು ಚಹಾವನ್ನು ಸಹ ಅವನು ಭಿಕ್ಷೆ ಬೇಡಿ ಕುಡಿಯ ಬೇಕಾಯಿತು. ಅನಂತರ ಅವನು ತಂತಿಯ ಕೆಲಸದಲ್ಲಿದ್ದ ಒಬ್ಬ ಸ್ನೇಹಿತನ ಬಳಿಗೆ ಹೋಗಿ ಅವನಿಂದ ಒಂದು 'ಡಾಲರ'ನ್ನು ಸಾಲ ಪಡೆದನು. ಇನ್ನೊಬ್ಬರು ಸ್ನೇಹಿತರು ಒಂದು ಕಾರ್ಖಾನೆಯಲ್ಲಿ ಸಾಮಾನುಗಳನ್ನು ಪೇರಿಸಿದ್ದ ಒಂದು ಕೊಠಡಿಯಲ್ಲಿ ಮಲಗುವುದಕ್ಕೆ ಅವನಿಗೆ ಅವಕಾಶ ಮಾಡಿಕೊಟ್ಟರು. ಆ ಸಾಮಾನುಗಳ ಪೈಕಿ ಕಾರ್ಖಾನೆಯ ಆಫೀಸರುಗಳಿಗೆ ಬಿಸಿಬಿಸಿ ಸುದ್ದಿಗಳನ್ನು ತಿಳಿಸುವುದಕ್ಕೆ ಬೇಕಾದ ಯಂತ್ರೋಪಕರಣಗಳಿದ್ದುವು.

ಮುಂದೇನು ಮಾಡಬಹುದೆಂದು ಎಡಿರ್ಸ ಆಲೋಚಿಸುತ್ತಿದ್ದನು. ಸ್ನೇಹಿ ತನು ಸಾಲಕೊಟ್ಟಿದ್ದ ಡಾಲರೂ ವೆಚ್ಚವಾಗಿ ಬಿಟ್ಟದ್ದಿತು. ಹೀಗಿದ್ದಾಗ ಯಾವುದೋ ಕಾರಣದಿಂದ ಕಾರ್ಖಾನೆಯ ಯಂತ್ರಗಳೆಲ್ಲಾ ಒಂದು ದಿನ ಚಲಿಸದೆ ನಿಂತು ಹೋದವು. ಕಾರಣವೇನೆಂದು ಕೆಲಸಗಾರರಲ್ಲಿ ಯಾರಿಗೂ

ತಿಳಿಯದಾಯಿತು. ಸ್ವಲ್ಪ ವೇಳೆಯೊಳಗಾಗಿ ಎಡಿಸನ್ನನು ಯಂತ್ರಗಳು ನಿಂತು ಹೋಗಿದ್ದುದಕ್ಕೆ ಕಾರಣವನ್ನು ಕಂಡುಹಿಡಿದು ಯಂತ್ರಗಳನ್ನು ಸರಿಪಡಿಸಿದನು. ಯಂತ್ರಾಲಯದ ಮಾಲೀಕನಿಗೆ ಬಹಳ ಸಂತೋಷವಾಗಿ, ಅವನು ಎಡಿಸನ್ನನನ್ನು 'ಮ್ಯಾನೇಜರ್' ಸ್ಥಾನಕ್ಕೆ ನೇಮಕ ಮಾಡಿದನು. ಸ್ವಲ್ಪ ಕಾಲದೊಳಗೇ ಸುದ್ದಿಗಳನ್ನು ತರಿಸಿಕೊಳ್ಳುವುದಕ್ಕೆ ಇನ್ನೂ ಉತ್ತಮವಾದ ಯಂತ್ರವನ್ನು ಕಂಡುಹಿಡಿದು 'ಎಡಿಸನ್ನ'ನು ಅದರ ಮೇಲಿನ ಸಂಪೂರ್ಣ ಸ್ವಾಮ್ಯದ ಹಕ್ಕನ್ನು ಪಡೆದು ಆ ಹಕ್ಕನ್ನು ಮಾರಿದನು.

ಹೀಗೆ ಧನಾಢ್ಯನಾದ ಮೇಲೆ ತನ್ನ ಸಂಪೂರ್ಣ ಕಾಲವನ್ನು ಹೊಸ ವಿಚಾರಗಳನ್ನು ಕಂಡು ಹಿಡಿಯುವುದಕ್ಕೆ ವಿನಿಯೋಗಿಸಬೇಕೆಂದು ಥಾಮಸ್ ಎಡಿಸನ್ ತೀರ್ಮಾನಿಸಿದನು. ಅದಕ್ಕಾಗಿ 'ನ್ಯೂಜರ್ಸಿ'ಯಲ್ಲಿ ಅವನು ಒಂದ. ಹೊಸ ಪ್ರಯೋಗಶಾಲೆಯನ್ನು ಸ್ಥಾಪಿಸಿದನು. ಅದರಲ್ಲಿ ಇನ್ನೂರೈವತ್ತು ಮಂದಿ ಕೆಲಸಗಾರರನ್ನು ಕೆಲಸಕ್ಕೆ ನೇಮಕ ಮಾಡಿಕೊಂಡನು. ಮುಂದಿನ ಆರು ವರ್ಷಗಳಲ್ಲಿ ಅವನು ನೂರ ಇಪ್ಪತ್ತೆರಡು ಶೋಧನೆಗಳಿಗೆ ಕಾರಣನಾದನು. ಅವುಗಳಲ್ಲಿ ಹೆಚ್ಚು ಶೋಧನೆಗಳು 'ಟೆಲಿಗ್ರಫಿ'ಗೆ ಸಂಬಂಧಪಟ್ಟವು ಒಂದೇ ತಂತಿಯ ಮೂಲಕ ಏಕಕಾಲದಲ್ಲಿ ಹಲವು ವಾರ್ತೆಗಳನ್ನು ಕಳುಹಿಸುವ ಶೋಧನೆಯನ್ನು ಕಂಡುಹಿಡಿದು ಎಡಿಸನ್ನನು ತಂತಿಯ ಸಾಲುಗಳನ್ನು ಹಾಕಿಸುವುದಕ್ಕೆ ಬೇಕಾಗುವ ವೆಚ್ಚವನ್ನು ತಗ್ಗಿಸುವುದಕ್ಕೆ ಅನುಕೂಲ ಮಾಡಿಕೊಟ್ಟನು. ತಾನಾಗಿಯೇ ವಾರ್ತೆಗಳನ್ನು ಗುರ್ತಿಸಿಕೊಳ್ಳತಕ್ಕಂಥ ಇನ್ನೊಂದು ಯಂತ್ರವನ್ನೂ, ಆ ವಾರ್ತೆಗಳನ್ನು ತಾನಾಗಿಯೇ ಕಳುಹಿಸಿಕೊಡುವಂಥ ಬೇರೆ ಯಂತ್ರವನ್ನೂ ತಯಾರಿಸಿ, ನಿಮಿಷಕ್ಕೆ ಅನೇಕ ಪದಗಳನ್ನು ತಂತಿಯ ಮೂಲಕ ತಿಳಿಸುವುದಕ್ಕೆ ಅನುಕೂಲಮಾಡಿಕೊಟ್ಟನು. ಅದರ ಜೊತೆಗೆ, 'ಟೈಪ್‌ರೈಟರ್' ಯಂತ್ರವನ್ನು ನಿರ್ಮಿಸುವುದರಲ್ಲೂ ಅವನು ಬಹಳ ಸಹಾಯಮಾಡಿದನು.

'ಮೆನ್ಲೋಪಾರ್ಕ್' ಎಂಬುದು ನ್ಯೂಯಾರ್ಕಿನಿಂದ ಇಪ್ಪತ್ತೈದು ಮೈಲಿಗಳ ದೂರದಲ್ಲಿರುವ ಗ್ರಾಮ. ತನ್ನ ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ—ಎಂದರೆ 1876ರಲ್ಲಿ—ಎಡಿಸನ್ನನು ಆ ಗ್ರಾಮದಲ್ಲಿ ತನ್ನ ಪ್ರಸಿದ್ಧವಾದ ಪ್ರಯೋಗಶಾಲೆಯನ್ನು ಸ್ಥಾಪಿಸಿದನು. ಆಗ್ಗೆ ಕೆಲವು ವರ್ಷಗಳ ಹಿಂದೆ ಅಲೆಗ್ಸಾಂಡರ್

ಗ್ರಹಾಂಬೆಲ್ ಎಂಬಾತನು 'ಟೆಲಿಫೋನ್' ಯಂತ್ರವನ್ನು ಕಂಡು ಹಿಡಿದಿದ್ದನು. ಆದರೆ ಆ ಯಂತ್ರದಿಂದ ಕಳುಹಿಸಲಾಗುತ್ತಿದ್ದ ವಾರ್ತೆಗಳು ಚೆನ್ನಾಗಿ ಕೇಳಿಸದೆ ಅಸ್ಪಷ್ಟವಾಗಿರುತ್ತಿದ್ದುವು. ಅಲ್ಲದೆ ಆ ವಾರ್ತೆಗಳನ್ನು ಅಕ್ಕಪಕ್ಕದ ಸ್ಥಳಗಳಿಗೆ ತಿಳಿಸಬಹುದಾಗಿದ್ದಿತೇ ಹೊರತು ದೂರದ ಸ್ಥಳಗಳಿಗೆ ತಿಳಿಸುವುದಕ್ಕಾಗುತ್ತಿರಲಿಲ್ಲ. ಎಡಿಸನ್ನನು ಪ್ರಯೋಗಗಳನ್ನು ನಡೆಯಿಸಿ, ತಂತಿಗಳನ್ನು ಎಷ್ಟು ದೂರ ಹಾಕಬಹುದೋ ಅಷ್ಟು ದೂರವೂ ವಾರ್ತೆಗಳು ಸ್ಪಷ್ಟವಾಗಿ ಕೇಳಿಸುವಂತೆ ಯಂತ್ರವನ್ನು ಉತ್ತಮಪಡಿಸಿದನು.

1877ನೆಯ ಇಸವಿಯಲ್ಲಿ ಒಂದು ದಿನ ಎಡಿಸನ್ನನು ಒಂದು ಟೆಲಿಫೋನ್ ವಾರ್ತಾಸಂಗ್ರಾಹಕವನ್ನು ('ರಿಸೀವರ್') ಇಟ್ಟುಕೊಂಡು ತನ್ನ ಪ್ರಯೋಗಶಾಲೆಯಲ್ಲಿ ಕೆಲಸ ಮಾಡುತ್ತಿದ್ದನು. ಅದರಲ್ಲಿ ಅವನು ಮಾತನಾಡಿದಾಗ ಒಳಗಿದ್ದ ಲೋಹದ ತೆಳುವಾದ ತಗಡು ಅದುರಿದುದನ್ನು ಕಂಡನು. ಕೂಡಲೆ ಎಡಿಸನ್ ಸ್ವಲ್ಪಕಾಲ ಏನೋ ಯೋಚನೆ ಮಾಡುತ್ತ ಕುಳಿತನು. ಯಾವುದೋ ಒಂದು ಆಶ್ಚರ್ಯಕರವಾದ ಅಂಶವು ಅವನ ಮನೋನೇತ್ರಕ್ಕೆ ಹಠಾತ್ತನೆ ಹೊಳೆದಿದ್ದಿತು. ಲೋಹದ ತೆಳು ತಗಡು ಅವನ ಧ್ವನಿಯಿಂದ ಹೊರಟಂಥ ಶಬ್ದದ ಅಲೆಗಳನ್ನೇ ಹೊರಡಿಸಿದ್ದಿತು. ಅಂಥ ಅಲೆಗಳು ಬರುವುದೇನೂ ಹೊಸ ವಿಚಾರವಾಗಿರಲಿಲ್ಲ. 'ಟೆಲಿಫೋನ್' ಯಂತ್ರವು ನಡೆಯುವುದೇ ಆ ಅಲೆಗಳ ದೆಸೆಯಿಂದಾಗಿದ್ದಿತು. ಒಂದುವೇಳೆ ತಾನು ಮಾತನಾಡದಿರುವಾಗಲೂ ಆ ತೆಳುವಾದ ತಗಡು ಅದೇ ರೀತಿ ಅದುರುವಂತೆ ಮಾಡಿದರೆ, ಆಗಲೂ ಸಹ ತಗಡಿನಿಂದ ಅದೇ ಧ್ವನಿ ಹೊರಡುವುದಿಲ್ಲವೆ?—ಎಂಬುದೇ ಅವನಿಗೆ ಸ್ಫುರಿಸಿದ ಪ್ರಶ್ನೆಯಾಗಿದ್ದಿತು.

ರಾತ್ರಿಯೆಲ್ಲಾ ಎಡಿಸನ್ ಆಲೋಚಿಸುತ್ತಲೂ, ಯಂತ್ರದ ಚಿತ್ರಗಳನ್ನು ಬರೆಯುತ್ತಲೂ ಕಳೆದನು. ಮಾರನೆಯ ಬೆಳಗ್ಗೆ 'ಜಾನ್ ಕ್ರೂಸಿ' ಎಂಬ ತನ್ನ ಅತ್ಯಂತ ಚತುರನಾದ ಕೆಲಸಗಾರನಿಗೆ ಹೇಳಿ ಕಳುಹಿಸಿದನು. ಕ್ರೂಸಿಯು ಬಂದಾಗ ಅವನಿಗೊಂದು ಕಾಗದವನ್ನು ಕೊಟ್ಟು ಎಡಿಸನ್ನನು,—

"ಕ್ರೂಸಿ, ಆ ಚಿತ್ರದಂತೆ ಒಂದು ಯಂತ್ರವನ್ನು ಕೂಡಲೆ ತಯಾರಿಸಿಕೊಡು"—ಎಂದನು.

"ಇದು ಯಾವ ಯಂತ್ರವೋ ?"—ಕ್ರೂಸಿಯ ಪ್ರಶ್ನೆ.

"ಅದು 'ಮಾತನಾಡುವ ಯಂತ್ರ.' ಯಂತ್ರವನ್ನು ತಯಾರಿಸಿಕೊಡು. ಆಮೇಲೆ ನೋಡುವಿಯಂತೆ."

ಎಡಿಸನ್ನನು ತಮಾಷೆ ಮಾಡುತ್ತಿದ್ದಾನೆಂದು ಕ್ರೂಸಿ ಯೋಚಿಸಿದನು. ಆದರೂ ಹೇಗಾದರೆ ಹಾಗಾಗಲೆಂದು ಕೆಲಸಕ್ಕೆ ಪ್ರಾರಂಭಿಸಿದನು.

ಎರಡು ದಿನಗಳಲ್ಲಿ ಯಂತ್ರವು ಸಿದ್ಧವಾಯಿತು. ಲೋಹದಲ್ಲಿ ಮಾಡಿದ ಒಂದು ವರ್ತುಲಸ್ತಂಭಾಕೃತಿಯ ಭಾಗದಲ್ಲಿ ಮೇಲುಗಡೆ ಸುತ್ತಲೂ ಕೊರೆದು ಸ್ಥಳಮಾಡಿ, ಮೇಲುಭಾಗವನ್ನು ತಿರುಗಿಸುವುದಕ್ಕೆ ಒಂದು ಸಾಧನವನ್ನು ಆ ಯಂತ್ರಕ್ಕೆ ಜೋಡಿಸಿದ್ದಿತು. ಯಂತ್ರದ ಪಕ್ಕದಲ್ಲಿ ಒಂದು ಲೋಹದ ಪಟ್ಟಿ; ಆ ಪಟ್ಟಿಯಲ್ಲಿ ಲೋಹದ ತಗಡಿನ ಪದರವಿದ್ದಿತು. ಆ ಪದರದ ಮಧ್ಯೆ ಒಂದು ಸೂಜಿಯನ್ನು ಚುಚ್ಚಿದ್ದಿತು.

ಆ ವಿಚಿತ್ರವಾದ ಯಂತ್ರವನ್ನು ಹೇಗೆ ಉಪಯೋಗಿಸುತ್ತಾರೋ ಎಂದು ನೋಡುವುದಕ್ಕಾಗಿ ಯಂತ್ರಾಲಯದಲ್ಲಿದ್ದ ಎಲ್ಲಾ ವಿಜ್ಞಾನಿಗಳೂ, ಕೆಲಸಗಾರರೂ ಸುತ್ತಲೂ ಸೇರಿದರು.

"ಈ ಯಂತ್ರವು ಮಾತನಾಡುತ್ತದೆ" ಎಂದು ಎಡಿಸನ್ ಹೇಳಿದಾಗ ಸುತ್ತಲಿದ್ದವರೆಲ್ಲಾ ನಕ್ಕರು.

"ಯಾಕೆ ನಗುತ್ತೀರಿ? ನಾನು ತಮಾಷೆ ಮಾಡುತ್ತಿಲ್ಲ. ಸ್ವಲ್ಪ ತಡೆಯಿರಿ, ನೀವೇ ನೋಡಬಹುದಂತೆ" ಎಂದ ಎಡಿಸನ್.

ಎಡಿಸನ್ನನು ಒಂದು ತಗಡಿನ ಪದರವನ್ನು ತೆಗೆದುಕೊಂಡು, ಆ ವರ್ತುಲಸ್ತಂಭಾಕೃತಿಯ ಲೋಹದ ಸುತ್ತಲೂ ಸುತ್ತಿದನು. ಅನಂತರ ಆ ಪದರದ ಮೇಲೆ ಸೂಜಿಯು ತಗಲುವಂತೆ ಕೊಳವೆಯನ್ನು ತಿರುಗಿಸಿದನು. ಸೂಜಿಯು ಪದರದ ಮೇಲಿದ್ದ ವರ್ತುಲಾಕೃತಿಯ ಗೆರೆಯ ಮೇಲೆ ಒತ್ತುತ್ತಿದ್ದಿತು. ಕೈಹಿಡಿಯನ್ನು ತಿರುಗಿಸಿ ಎಡಿಸನ್ನನು ಆ ವರ್ತುಲಸ್ತಂಭಾಕೃತಿಯ ಲೋಹವು ತಿರುಗುವಂತೆ ಮಾಡಿದನು. ಅದು ತಿರುಗುತ್ತಿದ್ದಾಗ ಅವನು ಆ ಯಂತ್ರದ ಪಕ್ಕಕ್ಕೆ ಬಗ್ಗಿ ಕೊಳವೆಯ ಸಮೀಪದಲ್ಲಿ ಕೆಳಗೆ ಬರೆದಿರುವ ಪದ್ಯವನ್ನು ಗಟ್ಟಿಯಾಗಿ ನುಡಿದನು :—

ಮೇರಿ ಬಳಿಯಲಿದ್ದುದೊಂದು ಸಣ್ಣ ಕುರಿಮರಿ
ಮಂಜಿನಂತೆ ಬೆಳ್ಳಗಿದ್ದುದದರ ತುಪ್ಪಟ;

ಮೇರಿಯೆಲ್ಲಿಗ್ಹೋದರಲ್ಲಿ ಹೋಗುತಿದ್ದುದು
ಬಸವನ್ಹಿಂದೆ ಬಾಲದಂತೆ ತಿರುಗುತಿದ್ದುದು.

ಎಡಿಸನ್ನನು ಪದ್ಯವನ್ನು ಓದುತ್ತಿದ್ದಾಗ ಲೋಹದ ಪದರವು ಅದುರುತ್ತಿದ್ದಿತು. ಸೂಜಿಯು ವರ್ತುಲಸ್ತಂಭಾಕೃತಿಯ ಮೇಲೆ ಸುತ್ತಲೂ ಆ ಶಬ್ದದ ಅಲೆಗಳಿಂದ ಕೂಡಿದ ಸಣ್ಣ ಗೀರನ್ನು ಗೀಚಿತು. ಅನಂತರ ಎಡಿಸನ್ನನು ಸೂಜಿಯನ್ನು ಆ ಗೆರೆಯು ಪ್ರಾರಂಭವಾದ ಸ್ಥಾನದಲ್ಲೇ ನಿಲ್ಲಿಸಿ, ಕೊಳವೆಯನ್ನು ತಿರುಗಿಸಿದನು. ಆಶ್ಚರ್ಯ! ಆಶ್ಚರ್ಯ!! ಕೊಳವೆಯ ಬಾಯಿಂದ ಅವನು ಹೇಳಿದ ಪದ್ಯವು, ಅದೇ ದನಿಯಲ್ಲಿ, ಪುನಃ ಹೊರಬಿದ್ದಿತು. ಇಂತು 'ಮಾತನಾಡುವ ಯಂತ್ರ'ವೊಂದು ನಿರ್ಮಿತವಾದಂತಾಯಿತು. ಎಡಿಸನ್ನನು ಅದನ್ನು 'ಫೋನೊಗ್ರಾಫ್' ಎಂದು ಕರೆದನು. ಈಗ ಅದೇ ಯಂತ್ರಕ್ಕೆ 'ಗ್ರಾಮಫೋನ್' ಎಂದು ಹೆಸರಾಗಿದೆ.

ಮಾರನೆಯ ದಿನ ಬೆಳಗ್ಗೆ ಎಡಿಸನ್ನನು ಕಂಕುಳಲ್ಲಿ ಯಾವುದೋ ಒಂದು ಸಾಮಾನಿನ ಪೊಟ್ಟಣವನ್ನು ಇರುಕಿಕೊಂಡು, ನ್ಯೂಯಾರ್ಕ್ ಪಟ್ಟಣದ ಅತ್ಯಂತ ಪ್ರಸಿದ್ಧವಾದ ದಿನಪತ್ರಿಕೆಯ ಕಚೇರಿಗೆ ಹೋಗಿ ಅಲ್ಲಿ ಸಂಪಾದಕರ ಮುಂದೆ ನಿಂತನು. ಅನಂತರ ಪೊಟ್ಟಣವನ್ನು ಬಿಚ್ಚಿ, ಅದರಲ್ಲಿದ್ದ ಯಂತ್ರವನ್ನು ತೆಗೆದು, ಸಂಪಾದಕರ ಮೇಜಿನ ಮೇಲಿಟ್ಟನು.

"ಏನದು ಎಡಿಸನ್‌ರವರೇ?" ಎಂದರು ಸಂಪಾದಕರು.

ಎಡಿಸನ್ ಮುಗುಳುನಗೆ ಬೀರುತ್ತ ಯಂತ್ರವನ್ನು ಸಂಪಾದಕರ ಬಳಿ ಜರುಗಿಸಿದನು. ಸಂಪಾದಕರು ಅದು ಏನಿರಬಹುದೆಂದು ಊಹಿಸಲಾಗದೆ, ಸುಮ್ಮನೆ ಕೊಳವೆಯನ್ನು ಹಿಂದಕ್ಕೆ ಜರುಗಿಸುವಂತೆ ಹಿಡಿಯನ್ನು ತಿರುಗಿಸಿದರು. ಕೂಡಲೆ ಯಂತ್ರದಿಂದ "ನಮಸ್ಕಾರ, ಸಂಪಾದಕರೆ! ಈ ಹೊಸ ಮಾತನಾಡುವ ಯಂತ್ರ ಚೆನ್ನಾಗಿದೆಯೆ?" ಎಂಬ ಶಬ್ದಗಳನ್ನು ಕೇಳಿ ಸಂಪಾದಕರು ದಿಗ್ಭ್ರಾಂತರಾದರು. ತಮ್ಮ ಕಿವಿಗಳನ್ನೇ ತಾವು ನಂಬದಾದರು! 'ಇದೇನು ಭೂತಚೇಷ್ಟೆಯೋ, ಅಥವಾ ಇನ್ನೇನು ಮಾಯವೋ?' ಎಂದು ತಿಳಿಯದೆ ಅವರಿಗೆ ತಮ್ಮ ಕುರ್ಚಿಯಿಂದ ಬಿದ್ದುಬಿಡುವಂತಾಯಿತು. ಅವರ ಆಗಿನ ಅವಸ್ಥೆಯನ್ನು ನೋಡಿ ಎಡಿಸನ್ ನಗಲಾರಂಭಿಸಿದನು.



ಕೊಳವೆಯ ಬಾಯಿಂದ ಅವನು ಹೇಳಿದ ಪದ್ಯವು ಪುನಃ ಹೊರಬಿದ್ದಿತು

ಕೊನೆಗೆ ಎಡಿಸನ್ ಸಂಪಾದಕರಿಗೆ ಎಲ್ಲವನ್ನೂ ವಿವರಿಸಿದನು. ಸಂಪಾದಕರು ಆ ಹೊಸ ಯಂತ್ರದ ವಿಚಾರವನ್ನು ಪತ್ರಿಕೆಯಲ್ಲಿ ಬರೆದರು. ಅಮೆರಿಕಾದಲ್ಲೆಲ್ಲಾ ಆ ಯಂತ್ರದ ವಿಚಾರವನ್ನೇ ಎಲ್ಲೆಲ್ಲೂ ಜನರು ಮಾತನಾಡಿಕೊಳ್ಳುವಂತಾಯಿತು. ಪತ್ರಿಕೆಯಲ್ಲಿ ಬಂದ ಸುದ್ದಿಯನ್ನು ಬಹು ಜನ ನಂಬಲಿಲ್ಲ. ಕೆಲವರು ಬುದ್ಧಿವಂತರು : "ಛೆ! ಛೆ!! ಎಲ್ಲಾದರೂ ಉಂಟೆ? ಯಂತ್ರವು ಮಾತನಾಡುವುದೆಂದರೇನು? ಎಲ್ಲಾ ಬರೀ ಕಟ್ಟುಕಥೆ" ಎಂದರು. ಹಲವು ಮಂದಿ ನಿಜಾಂಶವೇನೋ ಕಂಡು ಬರಬೇಕೆಂದು ಮೆನ್ಲೋಪಾರ್ಕಿಗೇ ಹೊರಟರು. ಅಲ್ಲಿ ಯಂತ್ರದ ವಿಚಾರವು ನಿಜವೆಂದು ಖಾತರಿಯಾದ ಮೇಲೆ ಅವರೆಲ್ಲರೂ, ಎಡಿಸನ್ನನು ವಾಷಿಂಗ್ಟನ್ನಿಗೆ ಹೋಗಿ ತನ್ನ ಯಂತ್ರವನ್ನು ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಪ್ರೆಸಿಡೆಂಟರಿಗೆ ತೋರಿಸಬೇಕೆಂದು, ಅವನನ್ನು ಒತ್ತಾಯಮಾಡಿದರು.

ಕೆಲವು ವರ್ಷಗಳಲ್ಲೇ 'ಫೋನೊಗ್ರಾಫ್' ಯಂತ್ರವು ಬಹಳ ಜನಾದರಣೀಯವಾಯಿತು. ಆ ಕಾಲದಲ್ಲಿ ಯಾರ ಮನೆಯಲ್ಲಿ ನೋಡಿದರೂ ಒಂದು 'ಫೋನೊಗ್ರಾಫ್' ಇರುತ್ತಿದ್ದಿತು. ಮುಂದೆ ಎಡಿಸನ್ನನು ಈಗ ನಾವು ಕಂಡಿರುವ ತಟ್ಟೆಗಳಂಥ 'ರಿಕಾರ್ಡು'ಗಳನ್ನು ತಯಾರಿಸಿದನು.

ಅನಂತರ ಹಲವು ತಿಂಗಳುಗಳ ಕಾಲ ಬಹಳ ಶ್ರಮಪಟ್ಟು ಸಂಶೋಧನೆಗಳನ್ನು ನಡೆಯಿಸಿ ಎಡಿಸನ್ನನು ವಿದ್ಯುಚ್ಛಕ್ತಿಯ ದೀಪವನ್ನು ಕಂಡುಹಿಡಿದನು. ಆ ದೀಪವನ್ನು ಕಂಡುಹಿಡಿಯುವುದರಲ್ಲಿ ಪರಿಹರಿಸಬೇಕಾಗಿದ್ದ ಸಮಸ್ಯೆಯು ಸುಲಭವಾಗಿರಲಿಲ್ಲ. ಅವನು ಕಂಡುಹಿಡಿಯುವ ತಂತಿಯು ವಿದ್ಯುಚ್ಛಕ್ತಿಯ ತೀವ್ರವಾದ ಶಾಖಕ್ಕೆ ಹೊತ್ತಿಕೊಂಡು ಬೆಳಕನ್ನು ಕೊಡುವುದಾಗಿಯೂ, ಆದರೆ ಆ ಉಷ್ಣದಲ್ಲಿ ಸುಟ್ಟುಹೋಗದಂತೆಯೂ ಇರುವ ಸ್ವಭಾವವನ್ನು ಹೊಂದಿರಬೇಕಾಗಿದ್ದಿತು. ಆ ಸಂಶೋಧನೆ, ಎಡಬಿಡದೆ ತಿಂಗಳುಗಟ್ಟಲೆ ನಡೆಯಿತು. ತನಗೆ ತೋರಿದ ಎಲ್ಲಾ ಲೋಹಗಳನ್ನೂ, ಇತರ ವಸ್ತುಗಳನ್ನೂ ಎಡಿಸನ್ನನು ತಂತಿಗಳನ್ನಾಗಿ ಮಾಡಿಸಿ, ಗಾಜಿನ ಬುರುಡೆಯೊಳಕ್ಕೆ ಸೇರಿಸಿ ದೀಪವನ್ನು ಹೊತ್ತಿಸಿ ನೋಡಿದುದಾಯಿತು. ಯಾವುದೂ ಸರಿಹೋಗಲಿಲ್ಲ. ಕಡೆಗೆ ಹತ್ತಿಯ ಬತ್ತಿಗೆ, ಅದು ಕಪ್ಪಾಗುವ ವರೆಗೆ ಶಾಖಕೊಟ್ಟು, ಅನಂತರ ಉಪಯೋಗಿಸಿದರೆ ಅದು ತನಗೆ ಬೇಕಾಗಿದ್ದ ಉದ್ದೇಶಕ್ಕೆ ಸರಿಹೋಗುವುದೆಂದು ತಿಳಿಯಿತು.

ಅದರಿಂದ ಮುಂದಿನ ಸಂಶೋಧನೆಗಳನ್ನು ಯಾವ ರೀತಿ ನಡೆಯಿಸಬೇಕೆಂಬುದಷ್ಟು ಮಾತ್ರ ಗೊತ್ತಾಯಿತು. ಅಲ್ಲಿಂದಾಚೆಗೆ ಅವನು ಬೇರೆ ಬೇರೆ ದೇಶಗಳಿಗೆ ಜನರನ್ನು ಕಳುಹಿಸಿ, ಆಯಾ ದೇಶಗಳಲ್ಲಿದ್ದ ಬಗೆ ಬಗೆಯ ವಸ್ತುಗಳನ್ನು ತರಿಸಿಕೊಂಡು, ಅವುಗಳನ್ನೆಲ್ಲ ಉಪಯೋಗಿಸಿ ನೋಡಿದನು. ಬಿದಿರಿನಲ್ಲಿರುವ ಸಣ್ಣ ನಾರನ್ನು ಸೀಕುಗಟ್ಟಿಸಿ ಉಪಯೋಗಿಸಿದರೆ, ಅದು ತನ್ನ ಉದ್ದೇಶಕ್ಕೆ ಬಹಳ ಚೆನ್ನಾಗಿ ಒದಗುವುದೆಂದು ದೃಢಪಟ್ಟಿತು. ಮನೆಗಳಿಗೂ, ಬೀದಿಗಳಿಗೂ ಪ್ರಕಾಶಮಾನವಾದ ದೀಪವನ್ನು ಹಾಕಿಸುವುದು ಸಾಧ್ಯವಾಯಿತು.

ಎಡಿಸನ್ನನು ನಡೆಯಿಸಿದ ಎಲ್ಲ ಪ್ರಯೋಗಗಳನ್ನೂ, ಕಂಡುಹಿಡಿದ ಎಲ್ಲ ಸಂಶೋಧನೆಗಳನ್ನೂ ವಿವರಿಸಬೇಕಾದರೆ ನೂರಾರು ಪುಟಗಳು ಬೇಕಾಗುತ್ತವೆ. ಇನ್ನು, ಒಂದೇ ಒಂದು ಸಂಶೋಧನೆಯನ್ನು ಮಾತ್ರ ತಿಳಿಸಿ ಎಡಿಸನ್ನನ ಕಥೆಯನ್ನು ಮುಕ್ತಾಯಮಾಡುತ್ತೇವೆ.

ಒಬ್ಬ ಮನುಷ್ಯನು ಚಲಿಸುತ್ತಿರುವಾಗ ಬೇರೆಬೇರೆ ಭಾವಭಂಗಿಗಳ ಚಿತ್ರಗಳನ್ನು 'ಫೋಟೋಗ್ರಾಫ್' ಯಂತ್ರದಿಂದ ಹಿಡಿಯಬಹುದೆಂದು ಆ ವರೆಗೆ ತಿಳಿದಿದ್ದಿತು. ಅದು ಸಾಧ್ಯವಾದರೆ, ಒಂದು ಮಾಯಾಲಾಂದ್ರದ ಸಹಾಯದಿಂದ ಆ ಚಿತ್ರಗಳು ಪರದೆಯ ಮೇಲೆ ಬೀಳುವಂತೆ ಮಾಡಬಹುದೆಂಬುದು ಎಡಿಸನ್ನನಿಗೆ ಹೊಳೆಯಿತು. ಕೂಡಲೆ, ಬಿಂಬಗ್ರಾಹಕ ಯಂತ್ರವನ್ನೂ ಮತ್ತು ಮಾಯಾಲಾಂದ್ರಗಳನ್ನೂ ಜೋಡಿಸಿದ ಯಂತ್ರವನ್ನು ತಯಾರಿಸುವುದಕ್ಕೆ ಎಡಿಸನ್ನನು ಪ್ರಾರಂಭಿಸಿದನು. ಅದಕ್ಕಾಗಿ ನಡೆಯಿಸಿದ ಪ್ರಯೋಗಗಳ ಫಲವಾಗಿ 'ಚಲನಚಿತ್ರ'ವು ಪ್ರಾರಂಭವಾಯಿತು. ಅನಂತರ 1912ರಲ್ಲಿ 'ಸಿನಿಮಾ' ಯಂತ್ರಕ್ಕೂ 'ಫೋನೊಗ್ರಾಫ್' ಯಂತ್ರಕ್ಕೂ ಜೋಡಣೆಯನ್ನುಂಟುಮಾಡಿ ಎಡಿಸನ್ನನು 'ಮಾತನಾಡುವ ಚಲನ ಚಿತ್ರ'ವನ್ನು ಕಂಡುಹಿಡಿದನು.

ಎಡಿಸನ್ನನಷ್ಟು ಶ್ರಮಪಟ್ಟು ಕೆಲಸ ಮಾಡಿದವರಿಲ್ಲ. ಅನೇಕ ಸಲ ಅವನು ಪ್ರಯೋಗಶಾಲೆಯಲ್ಲಿ ದಿನಕ್ಕೆ ಇಪ್ಪತ್ತು ಘಂಟೆಗಳ ಕಾಲ ಕೆಲಸ ಮಾಡುತ್ತಿದ್ದನು. ಕೆಲವು ಸಲ ಹಲವು ದಿನಗಳ ವರೆಗೆ ಏಕಪ್ರಕಾರವಾಗಿ ಕೆಲಸ ಮಾಡುತ್ತ, ನಿದ್ದೆ ಬಂದಾಗ ಸ್ವಲ್ಪಹೊತ್ತು ಅಲ್ಲೇ 'ಬೆಂಚಿನ' ಮೇಲೆ

ಮಲಗುತ್ತ, ಪುನಃ ಎದ್ದು ಕೆಲಸವನ್ನು ಮುಂದುವರಿಸುತ್ತ, ದುಡಿಯುತ್ತಿದ್ದನು. ಅವನ ಉತ್ಸಾಹ, ಕಾರ್ಯಶ್ರದ್ಧೆಗಳಿಂದ ಹುರುಪುಗೊಂಡು ಅವನ ಸೇವಕರು ಅವನ ಜೊತೆಗೆ ಕೆಲಸ ಮಾಡುವುದಕ್ಕೆ ಸಿದ್ಧರಾಗುತ್ತಿದ್ದರು.

ಎಡಿಸನ್ನನು 1931ರಲ್ಲಿ ತನ್ನ ಎಂಬತ್ತನಾಲ್ಕನೆಯ ವಯಸ್ಸಿನಲ್ಲಿ ದೈವಾಧೀನನಾದನು. ಆಗ್ಗೆ ಕೆಲವು ತಿಂಗಳುಗಳ ಹಿಂದಿನವರೆಗೂ ಅವನು ಎಂದಿನಂತೆ ಕಷ್ಟಪಟ್ಟು ದುಡಿಯುತ್ತಿದ್ದನು.

ಶಾಲೆಗೆ ಹೋಗುವುದಿಲ್ಲವೆಂದು ಹಠಮಾಡುತ್ತಿದ್ದು, ವರ್ತಮಾನಪತ್ರಿಕೆಗಳನ್ನು ಮಾರುತ್ತಿದ್ದ ಒಬ್ಬ ಹುಡುಗನು ಇಂತು ಪ್ರಪಂಚದಲ್ಲೆಲ್ಲಾ ಪ್ರಸಿದ್ಧ ವ್ಯಕ್ತಿಯಾದನು.



೬

# ಆಕಾಶಯಾನ

ಯಂತ್ರವನ್ನು ಸರಿಮಾಡುತ್ತಿದ್ದ ತರುಣನ ಕೈಯಲ್ಲಿದ್ದ ಸಣ್ಣ ಸುತ್ತಿಗೆಯು ತತ್‌ಕ್ಷಣವೇ ಜಾರಿಬಿದ್ದಿತು. ಕೈಗೇನೂ ಪೆಟ್ಟಾಗಲಿಲ್ಲ.

ಆದರೂ ತರುಣನಿಗೆ ಸಿಟ್ಟುಬಂದಿತು. "ಥುತ್ ! ಹಾಳು ಕೆಲಸ," ಎಂದುಕೊಂಡು ಅವನು ಆ ಕೆಲಸವನ್ನು ಅಷ್ಟಕ್ಕೇ ನಿಲ್ಲಿಸಿ, ಬಾಗಿಲ ಬಳಿ ಬಂದು ನಿಂತು ಬೀದಿಯಕಡೆ ನೋಡಲಾರಂಭಿಸಿದನು. ಅಷ್ಟರಲ್ಲೇ ಇನ್ನೊಂದು ಕಡೆಯಲ್ಲಿ ಕೆಲಸಮಾಡುತ್ತಿದ್ದ ಅವನ ಅಣ್ಣನೂ ಕೆಲಸವನ್ನು ನಿಲ್ಲಿಸಿ ತಮ್ಮನನ್ನು ನೋಡಿ :

"ಆರ್ವಿಲ್, ಬಹಳ ಪೆಟ್ಟಾಯಿತೋ ?" ಎಂದನು.

"ಏನೂ ಇಲ್ಲಣ್ಣ ; ಗಾಯವಾಗಲಿಲ್ಲ."

"ಆದರೂ ಅದೇನು ಅಷ್ಟು ಬೇಜಾರುಪಟ್ಟೆ ?"

"ಈ ದರಿದ್ರ ಸೈಕಲ್‌ಕೆಲಸವೇ ಬೇಜಾರಾಗಿದೆ. ವರ್ತಮಾನಪತ್ರಿಕೆ ಹೊರಡಿಸುವುದೇ ಚೆನ್ನಾಗಿದ್ದಿತು. ಬೈಸಿಕಲ್ ತಯಾರಿಸುವುದಕ್ಕಿಂತ ಬೀದಿ ಗುಡಿಸುವುದು ಮೇಲು."

"ಈ ಬುದ್ಧಿ ಮೊದಲೇ ಇರಬೇಕಾಗಿತ್ತು. ಬೈಸಿಕಲ್ ಕೆಲಸ ಮಾಡೋಣವೆಂದು ಎಷ್ಟೊಂದು ಪೀಡಿಸಿಬಿಟ್ಟೆ? ಅದರ ಫಲವನ್ನು ಈಗ ಅನುಭವಿಸದೆ ನಿರ್ವಾಹವಿಲ್ಲ. ಇದರಲ್ಲಿ ಸಂಪಾದನೆಯೇನೋ ಚೆನ್ನಾಗಿಯೇ ಇದೆ. ಆದರೆ................"

"ಆದರೆ ಒಂದೊಂದು ಸಲ ಬಹಳ ರೇಜಿಗೆ ಕೆಲಸ. ಮೇಜಿನ ಮುಂದೆ ಕುಳಿತು ಹಗಲೆಲ್ಲಾ ಲೇಖನಿ ಹಿಡಿಯುವುದಕ್ಕಿಂತ ಒಳ್ಳೆಯ ಕೆಲಸವೇನೋ ಸರಿ. ಆದರೆ ಈ ಕೆಲಸವೂ ಬೇಸರ ಬರಿಸುತ್ತದೆ."

ಅಣ್ಣನು ಮಾತನಾಡಲಿಲ್ಲ. ತಮ್ಮನು ಅನಿಶ್ಚಿತ ಮನಸ್ಕನಾಗಿ ಕೊಠಡಿಯಲ್ಲಿ ಶತಪಥ ತಿರುಗುತ್ತಿದ್ದು, ಅಲ್ಲೇ ಬಿದ್ದಿದ್ದ ವರ್ತಮಾನಪತ್ರಿಕೆಯೊಂದನ್ನು ತೆಗೆದುಕೊಂಡು ಓದುತ್ತಾ ಕುಳಿತನು.

ಓದಿದುದು ಅಣ್ಣನಿಗೆ ಕೇಳಿಸಿತೆಂದು ತೋರುತ್ತೆ. ಏಕೆಂದರೆ ಅವನು ಕೂಡಲೆ ತನ್ನ ಕೆಲಸವನ್ನು ನಿಲ್ಲಿಸಿ: "ಎಲ್ಲಿ, ಇನ್ನೊಂದು ಸಲ ಓದು, ಸ್ವಾರಸ್ಯವಾಗಿದೆ" ಎಂದನು.

ತಮ್ಮನು ಓದಿದುದು ಏನೆಂದರೆ: **"ಜರ್ಮನಿಯ ಹಾರಾಡುವ ಮನುಷ್ಯ ಆಟೊ ಲಿಲಿಯಂತಾಲನ ದುರ್ಮರಣ.** ಈತನು ಜೀವಮಾನ ಪರ್ಯಂತ ಪಕ್ಷಿಗಳು ಹಾರುವುದನ್ನು ಗಮನಿಸಿ, ಒಂದು ಹಾರುವಯಂತ ವನ್ನು ನಿರ್ಮಿಸಿದ್ದನು. ಅದರಲ್ಲಿ ಹಾರುತ್ತಿದ್ದಾಗ ಅಕಸ್ಮಾತ್ತಾಗಿ ಯಂತ್ರವು ಕೆಟ್ಟು ನೆಲಕ್ಕೆ ಬಿದ್ದು ಮೃತನಾದನು."

"ಸರಿ, ಸರಿ. ಬೆಳಗ್ಗೆ ಪತ್ರಿಕೆಯಲ್ಲಿ ನಾನೂ ಇದನ್ನೇ ಓದಿದ್ದೆ. ಆಗಿನಿಂದಲೂ ಈ ವಿಷಯವು ಹಲವು ಸಲ ಜ್ಞಾಪಕಕ್ಕೆ ಬಂದಿದೆ. ಮರೆಯ ಬೇಕೆಂದರೆ ಸಾಧ್ಯವಿಲ್ಲ."

"ಇರಲಿ ಬಿಡು, ಹಾರುವ ಯಂತ್ರವನ್ನೇ ತಯಾರಿಸಿಬಿಡೋಣ. ಈ ಬೈಸಿಕಲ್‌ಗಳಿಗಿಂತ ಒಳ್ಳೆಯದು."

——ಅಂದಿನಿಂದ ಆ ಸಹೋದರರು ವಿಮಾನವನ್ನು ತಾವು ತಯಾರಿಸ ಬೇಕೆಂದು ತೀರ್ಮಾನಿಸಿದರು. ಪ್ರಯೋಗಗಳನ್ನೂ ಸಾಧನೆಗಳನ್ನೂ ಪ್ರಾರಂಭಿಸಿಬಿಟ್ಟರು. ಅವರ ಉತ್ಸಾಹವೂ ಕಾರ್ಯಶ್ರದ್ಧೆಯೂ ಅಮಿತವಾಗಿ ದ್ದುವು. ತಮ್ಮ ಪಕ್ಕದ ಸಂಸ್ಥಾನವಾದ ಓಹಿಯೋ ಸಂಸ್ಥಾನಕ್ಕೆ ಹೋಗಿ ವಿಮಾನಗಳ ವಿಚಾರವನ್ನು ತಿಳಿಸುವ ಪುಸ್ತಕಗಳನ್ನು ಕೊಂಡುಕೊಂಡರು. ಕೆಲವು ಪುಸ್ತಕಗಳನ್ನು ಎರವಲಾಗಿ ತಂದರು. ಆ ಪುಸ್ತಕಗಳಲ್ಲಿದ್ದ ಎಲ್ಲ ವಿಷಯಗಳನ್ನೂ ಓದಿದರು. ವಾಷಿಂಗ್ಟನ್ ಪಟ್ಟಣದ ಪುಸ್ತಕಭಂಡಾರದಿಂದ ಪುಸ್ತಕಗಳನ್ನು ತರಿಸಿಕೊಳ್ಳುವುದಕ್ಕೆ ಏರ್ಪಾಟು ಮಾಡಿಕೊಂಡರು.

ವಿಮಾನಗಳ ವಿಚಾರದಲ್ಲಿ ಅಂದಿನ ವರೆಗೆ ನಡೆದಿದ್ದ ಎಲ್ಲ ಪ್ರಯೋಗ ಗಳನ್ನೂ ಅವರು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿದರು.

ಪಕ್ಷಿಗಳನ್ನು ನೋಡಿ ಹಿಂದಿನ ಕಾಲದಿಂದಲೂ ಮನುಷ್ಯನಿಗೆ ಅಸೂಯೆ. ತಾನೂ ಅವುಗಳಂತೆ ಆನಂದದಿಂದ ಹಾರಬೇಕೆಂದು ಮನುಷ್ಯನು ಬೇಕಾದಷ್ಟು ಪ್ರಯತ್ನ ನಡೆಯಿಸಿದ್ದಾನೆ. ಹೀಗೆ ಪ್ರಯತ್ನಿಸಿದವರ ಕಥೆಗಳು ಬಹಳ ವಾಗಿವೆ. ಗ್ರೀಕರ ಪುರಾತನ ಕತೆಗಳಲ್ಲಿ 'ಡೇಡಲಸ್' ಎಂಬಾತನು ತನಗಾ

ಗಿಯೂ ತನ್ನ ಮಗ ' ಐಕೇರಸ್ 'ನಿಗಾಗಿಯೂ ರೆಕ್ಕೆಗಳನ್ನು ತಯಾರಿಸಿದ ನೆಂದು ಹೇಳಿದೆ. ಅವರು ರೆಕ್ಕೆಗಳನ್ನು ಮೇಣದಿಂದ ಮೈಗೆ ಅಂಟಿಸಿಕೊಂಡು ಸೂರ್ಯನಿಗೆ ಬಹಳ ಸಮೀಪದ ವರೆಗೆ ಹಾರಿದರೆಂದೂ, ಆಗ ಮೇಣವು ಕರಗಿದ್ದ ರಿಂದ ಕೆಳಕ್ಕೆ ಬಿದ್ದರೆಂದೂ ಕಥೆಯಲ್ಲಿ ಹೇಳಿದೆ. ಅದೇನೋ ಪುರಾಣದ ಕಥೆ, ನಿಜವಿರಲಾರದು ಎಂದುಬಿಡಬಹುದು. ಅದೇರೀತಿ ನಮ್ಮ ದೇಶದ ಪುರಾಣ ಗಳಲ್ಲಿ ಬರುವ ಪುಷ್ಪಕ ವಿಮಾನಗಳ ವಿಚಾರವನ್ನೂ ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಆದರೆ ಹಿಂದಿನ ಕಾಲದಲ್ಲಿ ವಾಸ್ತವವಾಗಿ ಕೆಲವರು ಹಾರುವುದನ್ನು ಕಂಡುಹಿಡಿಯುವುದಕ್ಕೆ ಪ್ರಯತ್ನಿಸಿದರು, ಎನ್ನುವುದೇನೋ ನಿಜ. ವೈಜ್ಞಾನಿಕ ವಿಧಾನದಿಂದ ಹಾರುವುದಕ್ಕೆ ಪ್ರಯತ್ನಿಸಿದವರಲ್ಲಿ ಇಟಲಿಯ ಸುಪ್ರಸಿದ್ಧ ಚಿತ್ರಕಾರ ಲಿಯೊನಾರ್ಡೊ ಡಾವಿಂಚಿ ಮೊದಲನೆಯವನು. ಆತನು ಹಾರುವ ಯಂತ್ರಗಳ ಕೆಲವು ಚಿತ್ರಗಳನ್ನು ಬರೆದಿದ್ದಾನೆ.

ಲಿಯೊನಾರ್ಡೊವಿನ ಕಾಲವಾದ ಮೇಲೆ ಕೆಲವು ಶತಮಾನಗಳ ವರೆಗೆ ಅಂಥ ಪ್ರಯೋಗಗಳನ್ನು ಯಾರೂ ಮುಂದುವರಿಸಲಿಲ್ಲ. ಹದಿನೇಳನೆಯ ಶತಮಾನದ ವೇಳೆಗೆ ಕೆಲವರು ಪುನಃ ಪ್ರಯೋಗಗಳನ್ನು ನಡೆಯಿಸುವುದಕ್ಕೆ ಪ್ರಾರಂಭಿಸಿದರು. ಮನುಷ್ಯರು ಹಾರುವುದು ಎರಡು ರೀತಿಗಳಲ್ಲಿ ಸಾಧ್ಯವಾಗ ಬಹುದೆಂದು ಅವರು ಯೋಚಿಸಿದರು. ಮೊದಲನೆಯದು, ಗಾಳಿಗಿಂತ ಹಗುರ ವಾದ ಯಂತ್ರವನ್ನು ತಯಾರಿಸಿ ಅದರಲ್ಲಿ ಕುಳಿತು, ದೋಣಿಯಂತೆ ಅದನ್ನು ನಡೆಯಿಸಿಕೊಂಡು ಹೋಗುವುದು. ಎರಡನೆಯ ವಿಧಾನವು ಯಾವುದೆಂದರೆ, ಮನುಷ್ಯರು ಹಕ್ಕಿಗಳಂತೆ ರೆಕ್ಕೆಗಳನ್ನು ಕಟ್ಟಿಕೊಂಡು ಹಾರುವುದು.

ಹಾರುವ ಯಂತ್ರವನ್ನು ನಿರ್ಮಿಸುವುದಕ್ಕೆ ಮೊದಲು ಪ್ರಯತ್ನಿಸಿದವನು 'ಡಿಲಾನಾ' ಎಂಬ ಪಾದ್ರಿ. 1670ರಲ್ಲಿ ಆ ಪಾದ್ರಿಯು ಒಂದು ಪುಸ್ತಕವನ್ನು ಬರೆದನು. ಗಾಳಿಗಿಂತ ಹಗುರವಾದ ಯಂತ್ರವನ್ನು ತಯಾರಿಸಿದರೆ ಆ ಯಂತ್ರ ದಲ್ಲಿ ಮನುಷ್ಯನು ಹಾರಬಹುದೆಂದು ತಿಳಿಸಿದನು. ಅಂಥ ಯಂತ್ರವನ್ನು ತಯಾರಿಸುವುದು ಹೇಗೆಂದು ಒಂದು ವಿಚಿತ್ರವಾದ ಯಂತ್ರದ ವರ್ಣನೆಯನ್ನು ಆತನು ತನ್ನ ಪುಸ್ತಕದಲ್ಲಿ ಬರೆದನು. ಆದರೆ 'ಡಿಲಾನಾ' ಅಂಥ ಯಂತ್ರವನ್ನು ತಯಾರಿಸಲೂ ಇಲ್ಲ, ಅದರಲ್ಲಿ ಹಾರಲೂ ಇಲ್ಲ. ಅದನ್ನು, ಅಂದರೆ ಅಂಥ ಒಂದು ಯಂತ್ರವನ್ನು, ತಯಾರಿಸಿ ಹಾರಿಸಲು ಪ್ರಯತ್ನಿಸಿದ್ದರೂ

ಸಾಧ್ಯವಾಗುತ್ತಿರಲಿಲ್ಲ. ಅಂಥ ಯಂತ್ರವನ್ನು ತಯಾರಿಸಿದರೆ ಜನರು ಅದರಿಂದ ಭೂಮಿಯ ಮೇಲೆ ಕೆಂಡ, ಪಂಜು ಮೊದಲಾದುವನ್ನು ಹಾಕಬಹು ದೆಂದೂ, ಅದರಿಂದ ದೇವರಿಗೆ ಕೋಪವು ಬರುವುದೆಂದೂ ಡಿಲಾನಾ ಭಾವಿ ಸಿದನು. ಅಂತು ಹದಿನೇಳನೆಯ ಶತಮಾನದಲ್ಲಿ ಜನರು ವಿಮಾನಗಳ ವಿಚಾರ ವನ್ನು ಯೋಚಿಸುತ್ತಿದ್ದರು.

ಡಿಲಾನಾನ ಕಾಲದಿಂದ ಮುಂದೆ ನೂರು ವರ್ಷಗಳಾದ ಮೇಲೆ ಮಾಂಟ್‌ಗಾಲ್ಫರ್ ಸಹೋದರರೆಂಬವರಿಬ್ಬರು ಡಿಲಾನಾನಂತೆಯೇ ವಿಮಾನ ಗಳ ವಿಚಾರದಲ್ಲಿ ಸಂಶೋಧನೆಗಳನ್ನು ನಡೆಯಿಸಿದರು. ಡಿಲಾನಾನು ತನ್ನ ಯಂತ್ರಕ್ಕೆ ಜೋಡಿಸಬೇಕಾದ ಲೋಹದ ಗೋಳಗಳಿಂದ ಗಾಳಿಯನ್ನೆಲ್ಲಾ ತೆಗೆದುಬಿಡಬೇಕೆಂದು ಹೇಳಿದ್ದನು. ಆದರೆ ಮಾಂಟ್‌ಗಾಲ್ಫರ್ ಸಹೋದರರು ಅದಕ್ಕೆ ಬದಲಾಗಿ ಗೋಳಗಳಲ್ಲಿ ಬಿಸಿ ಗಾಳಿಯನ್ನು ತುಂಬಬೇಕೆಂದು ಯೋಚಿಸಿದರು. ಬಿಸಿಗಾಳಿಯು ತಂಪಾದ ಗಾಳಿಗಿಂತ ಹಗುರವಾಗಿರುತ್ತದೆ. ಮಾಂಟ್‌ಗಾಲ್ಫರ್ ಸಹೋದರರು ಕಾಗದದ ತಯಾರಿಕೆಗಾರರಾಗಿದ್ದರು. ಅವರು ಒರಟುಬಟ್ಟೆಯಿಂದ ಮಾಡಿದ ಗೋಳದ ಮೇಲೆ ಕಾಗದವನ್ನು ಅಂಟಿಸಿ ದರು. ಗೋಳದ ಅಡ್ಡಳತೆಯು ಮೂವತ್ತು ಅಡಿಗಳಾಗಿದ್ದುವು. ಗೋಳದ ಅಡಿಭಾಗವು ತೆರೆದಿದ್ದು ಅದರ ಕೆಳಗೆ ಯಂತ್ರದಲ್ಲಿ ಒಂದು ಕುಲುಮೆಯನ್ನಿಡ ಲಾಗಿದ್ದಿತು. ಕುಲುಮೆಯಿಂದ ಬಿಸಿಗಾಳಿ ಮೇಲಕ್ಕೆ ಹೋಗಿ ಗೋಳವನ್ನು ತುಂಬುತ್ತಿದ್ದಿತು. ಯಂತ್ರದ ಕೆಳಭಾಗದಲ್ಲಿ ಪ್ರಯಾಣಿಕರು ಕುಳಿತುಕೊಳ್ಳು ವುದಕ್ಕೆ ಸ್ಥಳವಿದ್ದಿತು. ಆ ವಿಮಾನವನ್ನು ಹಾರಿಸುವ ಮೊದಲು ಕುಲುಮೆ ಯನ್ನು ಹತ್ತಿಸಿದರು. ಫ್ರಾನ್ಸ್ ದೇಶದ ರಾಜನೂ, ದೊಡ್ಡ ಜನಸಂದಣಿಯೂ ಆ ವಿಮಾನವು ಹಾರುವುದನ್ನು ನೋಡುತ್ತಿದ್ದರು. ಬಿಸಿಗಾಳಿಯು ಗೋಳದಲ್ಲಿ ತುಂಬಿಕೊಂಡಾಗ ಯಂತ್ರವು ಮೇಲಕ್ಕೆ ಹಾರಿತು. ಅದರಲ್ಲಿ ಇಬ್ಬರು ಕುಳಿತಿದ್ದರು.

ಆ ಘಟನೆಯು ನಡೆಯುವುದಕ್ಕೆ ಕೆಲವು ವರ್ಷಗಳ ಹಿಂದೆಯೇ 'ಕ್ಯಾವೆಂ ಡಿಷ್' ಎಂಬ ಇಂಗ್ಲಿಷ್ ಶಾಸ್ತ್ರಜ್ಞನಿಕನು 'ಹೈಡ್ರೋಜನ್' ಎಂಬ ಅನಿಲವನ್ನು ಕಂಡುಹಿಡಿದಿದ್ದನು. ಹೈಡ್ರೋಜನ್ ಗಾಳಿಗಿಂತ ಹಗುರವಾದುದು. ಮಾಂಟ್ ಗಾಲ್ಫರ್ ಸಹೋದರರು ತಮ್ಮ ವಿಮಾನವನ್ನು ತಯಾರಿಸುವ ಕಾಲದ

ಒಂದು ವಿಮಾನವನ್ನು ತಯಾರಿಸಿ ಅದರಲ್ಲಿ ಬಿಸಿಗಾಳಿಗೆ ಬದಲಾಗಿ ಹೈಡ್ರೋ ಜನ್ ಅನಿಲವನ್ನು ತುಂಬಿದನು. ಆ ವಿಮಾನವನ್ನು ಹಾರಿಸಿದಾಗ ಅದರ ಯಾರೂ ಕುಳಿತಿರಲಿಲ್ಲ. ಆದರೆ ಅದು ಹಾರಿದಾಗ ಅದನ್ನು ನೋಡು ದಕ್ಕೆ ಬಹು ಮಂದಿ ಜನರು ಸೇರಿದ್ದರು. ಆ ವಿಮಾನವು ಕೆಲ ಮೈಲಿಗಳಷ್ಟು ಮೇಲಕ್ಕೆ ಹಾರಿ ಪಕ್ಕದ ಗ್ರಾಮವೊಂದರ ಬಳಿ ನೆಲಕ್ಕಿಳಿಯು ವಾಗ ಒಂದು ಮರಕ್ಕೆ ಸಿಕ್ಕಿ ನುಚ್ಚುನೂರಾಯಿತು. ಆ ಯಂತ್ರವು ಕೆಳಕ್ಕಿ ಯುವಾಗ ಅದರಿಂದ ಹೈಡ್ರೋಜನ್ ಅನಿಲವು ರಭಸದಿಂದ ಹೊರಕ್ಕೆ ಹೋ ವಾಗ ದೊಡ್ಡ ಶಬ್ದವಾಗುತ್ತಿದ್ದುದನ್ನು ಕೇಳಿ ಹಳ್ಳಿಯವರೆಲ್ಲಾ ಗಾಬರಿಯಿಂ ದಿಕ್ಕುಪಾಲಾಗಿ ಓಡುತ್ತಿದ್ದರು. ಆದರೆ ಕಡೆಗೆ ಗೋಳವು ಒಡೆದುಹೋ ಮರಕ್ಕೆ ಸಿಕ್ಕಿಕೊಂಡಾಗ ಅವರು ಧೈರ್ಯ ತಂದುಕೊಂಡು ಬಂದೂಕಗಳೊ ನೆಯೂ, ಕವೆಕೋಲುಗಳೊಡನೆಯೂ ಬಂದು ಅದರ ಮೇಲೆ ಬಿದ್ದು ಅದನ ಚೂರು ಚೂರು ಮಾಡಿದರು.

ಎರಡು ವರ್ಷಗಳಾದ ಮೇಲೆ ಬ್ಲಾಂಚಾರ್ಡ್ ಎಂಬವನು ಅದೆ ರೀತಿಯ ಒಂದು ಗೋಳದಲ್ಲಿ ಇಂಗ್ಲಿಷ್ ಕಾಲುವೆಯನ್ನು ದಾಟಿದನು ಮೊಟ್ಟಮೊದಲು ಆ ಗೋಳಗಳನ್ನು ನೋಡಿ ಜನರಿಗೆ ಗಾಬರಿಯಾದರು ಕ್ರಮೇಣ ಅವು ಜನರಿಗೆ ಸಾಮಾನ್ಯವಾಗಿ ಕಂಡವು.

ಆದರೆ ಅಂಥ ಗೋಳಗಳ ಸಹಾಯದಿಂದ ಪ್ರಯಾಣಕ್ಕೆ ಅನುಕೂ ವಿರಲಿಲ್ಲ. ಆ ಗೋಳಗಳು ಗಾಳಿಬಂದ ದಿಕ್ಕಿಗೆದುರಾಗಿ ಹಾರುತ್ತಿದ್ದುವು ಆದ್ದರಿಂದ ಮುಂದೆ ನೂರು ವರ್ಷಗಳ ಕಾಲ ಆಕಾಶಯಾನಗಳನ್ನು ಎಂದರೆ ಬೇಕಾದ ಕಡೆಗೆ ತಿರುಗಿಸಬಹುದಾದಂಥ ಯಾನಗಳನ್ನು ಕಂಡುಹಿ ಯುವ ಪ್ರಯೋಗಗಳು ಹೆಚ್ಚಾದುವು. ಆ ಪ್ರಯೋಗಗಳನ್ನು ನಡೆಯಿಸಿದ ರಲ್ಲಿ ಅತ್ಯಂತ ಪ್ರಸಿದ್ಧನಾದವನು ಜರ್ಮನಿಯ ಕೌಂಟ್ ಜೆಪಲಿನ್ ಎಂಬಾತನು ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಆತನು ಕಂಡುಹಿಡಿದ ಆಕಾ ಯಾನಗಳನ್ನು ಉಪಯೋಗಿಸಿ ಜರ್ಮನರು ಐವತ್ತಮೂರು ಸಲ ಇಂಗ್ಲೆಂಡಿ ಮೇಲೆ ವಿಮಾನಧಾಳಿ ನಡೆಯಿಸಿದರು.

ರೈಟ್ ಸಹೋದರರು ಆಕಾಶಬುಟ್ಟಿಗಳನ್ನೂ ವಿಮಾನಗಳನ್ನೂ ಕಂಡು ಹಿಡಿಯುವುದಕ್ಕೆ ಬದಲಾಗಿ ಜನರು ಪಕ್ಷಿಗಳಂತೆ ಹಾರಾಡುವ ವಿಧಾನ ವನ್ನು ಕಂಡುಹಿಡಿಯುವುದಕ್ಕೆ ಉಪಕ್ರಮಿಸಿದರು. ಆ ಸಹೋದರರು ತಮ್ಮ ಪ್ರಯೋಗಗಳನ್ನು ನಡೆಯಿಸುವುದಕ್ಕೆ ಹಿಂದೆ ಅದೇ ವಿಧವಾದ ಪ್ರಯತ್ನಗಳು ಎಷ್ಟುಮಟ್ಟಿಗೆ ನಡೆದಿದ್ದುವೆಂಬುದನ್ನು ಮೊದಲು ತಿಳಿಯೋಣ.

ಮನುಷ್ಯರು ಹಕ್ಕಿಗಳಂತೆ ಹಾರುವುದು ಸಾಧ್ಯವಾಗಬೇಕಾದರೆ ರೆಕ್ಕೆ ಗಳನ್ನು ತಯಾರಿಸಿ ಅವನ್ನು ಕೈಯಿಂದ ಬೇಕಾದ ಕಡೆಗೆ ತಿರುಸುವುದಕ್ಕೆ ಸಾಧ್ಯವಾಗುವಂತೆ ಜೋಡಿಸಿಕೊಳ್ಳಬೇಕೆಂದು ಪೂರ್ವಕಾಲದಿಂದಲೂ ಜನರು ನಂಬಿದ್ದರು. ಆದರೆ ಮನುಷ್ಯರು ಅಂಥ ರೆಕ್ಕೆಗಳನ್ನು ಉಪಯೋಗಿಸುವುದಕ್ಕೆ ಅವರ ಬಾಹುಬಲವು ಸಾಕಾಗದೆಂದು ಹದಿನೇಳನೆಯ ಶತಮಾನದಲ್ಲಿ ಬೋರೇಲಿ ಎಂಬ ವಿಜ್ಞಾನಿಯು ಅಭಿಪ್ರಾಯಪಟ್ಟನು. ಬೋರೇಲಿಯು ಹೇಳಿದುದೇನೋ ನಿಜವೇ ಸರಿ.

ಗಾಳಿಗಿಂತ ಭಾರವಾದ ಯಂತ್ರವನ್ನುಪಯೋಗಿಸಿಯೂ ಮನುಷ್ಯರು ಹಾರಬಹುದೆಂದು ಮೊಟ್ಟಮೊದಲು ತಿಳಿಸಿದವನು ಇಂಗ್ಲಿಷ್ ವಿಜ್ಞಾನಿ ಸರ್ ಜಾರ್ಜ್ ಕೇಲೀ ಎಂಬಾತನು. ಆತನು ಇಂದಿಗೆ ಸುಮಾರು ನೂರು ವರ್ಷ ಗಳ ಹಿಂದೆ ಜೀವಂತನಾಗಿದ್ದನು. ಹಕ್ಕಿಗಳು ಹಾರುವುದನ್ನು ಚೆನ್ನಾಗಿ ಗಮನಿಸಿದಮೇಲೆ ಈತನು, ಮನುಷ್ಯರಿಗೂ ಹಕ್ಕಿಗಳಂತೆ ರೆಕ್ಕೆಗಳಿದ್ದರೆ ಹಾರ ಬಹುದೆಂದು ಬೋರೇಲಿ ಹೇಳಿದ್ದುದು ಸರಿಯೆಂದು ಒಪ್ಪಿದನು. ಒಂದು ದಿನ ಈತನು ಕಾಗದವನ್ನು ದೋಣಿಯಂತೆ ಮಡಚಿ ಒಂದು ಬೆಟ್ಟದ ಮೇಲಿಂದ ಎಸೆದನು. ಅದು ಸ್ವಲ್ಪದೂರ ನೇರವಾಗಿ ಗಾಳಿಯಲ್ಲಿ ತೇಲಿ ಹೋಗಿ ಅನಂತರ ಬಿದ್ದುಹೋಯಿತು. ಅದರ ವೇಗವು ಮುಗಿದು ಹೋದ ಮೇಲೆ ಅದು ಬಿದ್ದುಹೋದುದರಿಂದ, ಆ ದೋಣಿಯನ್ನು ಇನ್ನೂ ಮುಂದಕ್ಕೆ ತಳ್ಳುವಂಥ 'ಇಂಜನ್' ಅದರಲ್ಲಿದ್ದು ಕೆಲಸಮಾಡುತ್ತಿದ್ದಲ್ಲಿ ಆ ದೋಣಿಯು ಬಿದ್ದುಹೋಗದೆ ಹಾರಾಡುತ್ತಲೇ ಇರಬೇಕಾಗಿದ್ದಿತೆಂದು ಕೇಲೀ ಸಿದ್ಧಾಂತ ಮಾಡಿದನು. ವಾಸ್ತವವಾಗಿ ವಿಮಾನಗಳು ಸಂಚರಿಸುವುದೇ ಹೀಗೆ.

ಆದರೆ ವಿಮಾನವನ್ನು ತಯಾರಿಸುವುದಕ್ಕೆ ಸರಿಯಾದ 'ಇಂಜಿನ'ನ್ನು ತಯಾರಿಸಬೇಕಾಯಿತಷ್ಟೆ. ಅದೇ ಆ ಕಾಲದಲ್ಲಿ ದೊಡ್ಡ ಸಮಸ್ಯೆಯಾಗಿದ್ದಿತು. ಆಗಿನ ಕಾಲದಲ್ಲಿ ಹಬೆ ಇಂಜಿನುಗಳೇ ಸಾಮಾನ್ಯವಾಗಿ ಬಳಕೆಯಲ್ಲಿದ್ದ ಇಂಜಿನುಗಳು. ಆದರೆ ಅಂಥ ಒಂದು ಇಂಜಿನನ್ನು ವಿಮಾನಕ್ಕೆ ಜೋಡಿಸಬೇಕೆಂದರೆ, ಅದಕ್ಕೆ ಬೇಕಾದ ಹಬೆಹಂಡೆ, ಕುಲುಮೆ, ಕಲ್ಲಿದ್ದಲು— ಇವುಗಳಿಂದೆಲ್ಲ ಯಂತ್ರವು ಬಹಳ ಭಾರವಾಗಿಬಿಡುವ ಸಂಭವವಿದ್ದಿತು. ಅಷ್ಟು ಭಾರವಾದ 'ಇಂಜಿನ'ನ್ನು ಹೊತ್ತ ವಿಮಾನವು ಹಾರುವುದೆಂದರೆ ಸಾಧ್ಯವೆ? ಸ್ವಲ್ಪ ಕಾಲಾನಂತರ ಸ್ಟ್ರಿಂಗ್‌ಫೆಲೊ ಎಂಬಾತನು ಒಂದು ಸಣ್ಣ ವಿಮಾನವನ್ನು ತಯಾರಿಸಿ, ಒಂದು ಪುಟ್ಟ ಇಂಜಿನನ್ನು ಜೋಡಿಸಿ ವಿಮಾನವು ಹಾರುವುದೇನೋ ಎಂದು ಪರೀಕ್ಷಿಸಿದನು. ವಿಮಾನವು ಕೆಲವು ಗಜಗಳ ದೂರದವರೆಗೆ ಹಾರಿತು.

ಆದರೆ ರೈಟ್ ಸಹೋದರರಿಗೆ ಬೇಕಾಗಿದ್ದ ಹಲವು ವಿಚಾರಗಳು ಆದಿನ ಪತ್ರಿಕೆಯಲ್ಲಿ ಅವರು ಯಾರ ಮರಣದ ವಿಚಾರವನ್ನು ಓದಿದ್ದರೋ ಆ ಆಟೋ ಲಿಲಿಯೆಂತಾಲನ ಪುಸ್ತಕಗಳಿಂದ ತಿಳಿಯಿತು. ಆಟೋವಿಗೆ ಚಿಕ್ಕ ವಯಸ್ಸಿನಿಂದಲೂ ಭೂಮಿಯಿಂದ ಮೇಲೆ ಹಾರಬೇಕೆಂದು ಆಸೆ. ಹಕ್ಕಿಗಳು ಮನೆಗಳ ಮೇಲೆ ಹಾರುವುದನ್ನೂ, ಸುತ್ತುವುದನ್ನೂ ನೋಡುವುದರಲ್ಲಿ ಆಟೊ ಹಲವು ಘಂಟೆಗಳ ಕಾಲವನ್ನು ಕಳೆದುಬಿಡುತ್ತಿದ್ದನು. ಆತನು ತಾನು ಕಂಡುಹಿಡಿದ ಎಷ್ಟೋ ವಿಚಾರಗಳನ್ನು ಪುಸ್ತಕಗಳಲ್ಲಿ ಬರೆದಿಟ್ಟನು. ಒಂದು ಸಲ ಲಾಳದಕಡ್ಡಿಗಳನ್ನೂ, ಬಟ್ಟೆಯನ್ನೂ ಉಪಯೋಗಿಸಿಕೊಂಡು ದೊಡ್ಡ ರೆಕ್ಕೆಗಳಿದ್ದ ಒಂದು ವಿಮಾನವನ್ನು ತಯಾರಿಸಿದನು. ಆ ರೆಕ್ಕೆಗಳು ತನ್ನ ತಲೆಗೂ ಭುಜಕ್ಕೂ ಎರಡುಕಡೆಗಳಲ್ಲಿ ಬರುವಂತೆ ಆ ಯಂತ್ರವನ್ನು ಕಟ್ಟಿಕೊಂಡು ಅವನು ಸ್ವಲ್ಪದೂರ ಹಾರಿಯೂ ಹಾರಿದನು.

ಆಟೋವಿನ ಮನೆಯ ಸಮೀಪದಲ್ಲಿ ಆಗ ಒಂದು ನಾಲೆಯನ್ನು ತೋಡುವ ಕೆಲಸವು ನಡೆಯುತ್ತಿದ್ದಿತು. ಆಟೊ ಆ ನಾಲೆಯ ಪಕ್ಕದಲ್ಲಿ ಕೆಲಸಗಾರರು ತೋಡಿಹಾಕಿದ್ದ ಮಣ್ಣನ್ನು ರಾಶಿಹಾಕಿ ಐವತ್ತಡಿ ಎತ್ತರದ ಒಂದು ಗುಡ್ಡವನ್ನು ಮಾಡಿದನು. ಆ ಗುಡ್ಡದಿಂದ, ಗಾಳಿಬಂದಾಗ ಆತನು ತನ್ನ

ಆ ವಿಮಾನದಲ್ಲಿ ಎರಡು ಮೂರು ಸಲ ಚೆನ್ನಾಗಿಯೇ ಹಾರಿದನು. ಆಗ ತನ್ನ ವಿಮಾನಕ್ಕೆ ಒಂದು ಇಂಜಿನನ್ನು ಜೋಡಿಸಬೇಕೆಂದು ಅವನಿಗೆ ತೋರಿತು. ಆದರೆ ಆ ಕೆಲಸವನ್ನು ಮಾಡುವ ವರೆಗೆ ಅವನು ಜೀವಂತನಾಗಿ ಉಳಿಯಲಿಲ್ಲ. ಒಂದುಸಲ ಗಾಳಿ ಬಲವಾಗಿ ಬೀಸಿದಾಗ ಅವನು ಗುಡ್ಡದಿಂದ ಹಾರಲು, ವಿಮಾನವು ಒಡೆದುಹೋಗಿ, ಆಟೋ ನೆಲಕ್ಕೆ ಬಿದ್ದು ಮೃತನಾದನು.

1896 ರಲ್ಲಿ ಪ್ರೊಫೆಸರ್ ಲ್ಯಾಂಗ್‌ಲೀ ಎಂಬ ಅಮೇರಿಕನ್ನನು ವಿಮಾನ ಸಂಚಾರದ ವಿಚಾರವನ್ನು ಬಹಳ ದೀರ್ಘವಾಗಿ ಆಲೋಚಿಸಿ, 'ಇಂಜಿನ್' ಜೋಡಿಸಿದ್ದ ಒಂದು ವಿಮಾನವನ್ನು ತಯಾರಿಸಿದನು. ಆ ವಿಮಾನವನ್ನು ಹಾರಿಸಿ ಒಂದು ನದಿಯನ್ನು ದಾಟಿಸುವುದೂ ಲ್ಯಾಂಗ್‌ಲೀಗೆ ಸಾಧ್ಯವಾಯಿತು.

ರೈಟ್ ಸಹೋದರರು ಮುಂದಿನ ಕೆಲವು ವರ್ಷಗಳಲ್ಲಿ ಈ ವಿಚಾರಗಳನ್ನೆಲ್ಲಾ ಸಂಗ್ರಹಿಸಿ ತಿಳಿದುಕೊಂಡರು. ಆಮೇಲೆ ಹಿಂದಿನವರು ನಡೆಯಿಸಿದ್ದ ಸಂಶೋಧನೆಗಳನ್ನು ತಾವು ಯಾವರೀತಿ ಮುಂದುವರಿಸಬಹುದೆಂದು ಅವರು ದೀರ್ಘವಾಗಿ ಆಲೋಚಿಸುವುದಕ್ಕೆ ಪ್ರಾರಂಭಿಸಿದರು. 1898ರಲ್ಲಿ ಒಂದು ದಿನ ಅವರು ತಮ್ಮ 'ವರ್ಕ್‌ಷಾಪಿ'ನಲ್ಲಿದ್ದಾಗ ಅವರಿಬ್ಬರಿಗೂ ಈ ವಿಚಾರವಾಗಿ ಮಾತುಕತೆ ನಡೆಯಿತು.

ವಿಲ್ಬರ್ : "ಮೊದಲು ನಾವು ಗಾಳಿಯಲ್ಲಿ ತೇಲುವಂಥ ಒಂದು ಯಂತ್ರವನ್ನು ಕಂಡುಹಿಡಿಯಬೇಕು. ಅದು ಯಾವ ರೀತಿ ತೇಲುವುದೆಂದು ನೋಡಿದಮೇಲೆ, ಅದನ್ನು ಬೇಕಾದಕಡೆಗೆ ತಿರುಗಿಸುವಂಥ ಏರ್ಪಾಟನ್ನು ಮಾಡಬೇಕಾಗುತ್ತದೆ. ಹಿಂದಿನವರೆಲ್ಲಾ ಯಂತ್ರವನ್ನು ನಿರ್ಮಿಸುವುದು ಹೀಗೆ ಹಾಗೆ—ಎಂದು ಕಾಗದದಮೇಲೆ ಚಿತ್ರಿಸಿ ತೋರಿಸುತ್ತಿದ್ದರು. ಅಂಥ ಯಂತ್ರವನ್ನು ಅವರು ಕಟ್ಟಿದಾಗಲೂ ಅದರಲ್ಲಿ ಹಾರಿದರೆ ಅವರು ಕೂಡಲೆ ಬಿದ್ದು ಸಾಯುತ್ತಿದ್ದರೆಂಬುದು ಖಂಡಿತ. ಅವರದೆಲ್ಲಾ ಪುಸ್ತಕದ ಬದನೇಕಾಯಿಯಾಗಿದ್ದಿತು."

ಆರ್ವಿಲ್ : “ ನಿಜ. ಮೊದಲು ಗಾಳಿಯಲ್ಲಿ ತೇಲುವುದನ್ನು ಕಂಡು ಹಿಡಿಯಬೇಕು. ಇಲ್ಲದಿದ್ದರೆ ವಾಯುಮಂಡಲದಲ್ಲಿ ಹಾರುತ್ತೇವೆನ್ನುವುದು ಶುದ್ಧ ಮೂರ್ಖತನ.”

“ಇಲ್ಲಿ ನೋಡು. ಒಂದು ಕುದುರೆಯ ಮೇಲೆ ಸವಾರಿಮಾಡಬೇಕಾದವರು ಘಂಟೆಗಟ್ಟಲೆ ಅದನ್ನೇ ನೋಡುತ್ತಿದ್ದು ಆಮೇಲೆ ಕಾಗದದಮೇಲೆ ಅದನ್ನು ಹತ್ತುವ ವಿಧಾನವನ್ನು ಚಿತ್ರಿಸುತ್ತಾರೇನು ? ಸವಾರಿಮಾಡಬೇಕಾದರೆ ಮೊದಲು ಕುದುರೆಯಮೇಲೆ ಕುಳಿತು, ಅನಂತರ ಅದನ್ನು ಓಡಿಸುವುದನ್ನು ಕಲಿಯಬೇಕು.”

“ಅಂದರೆ ಏನಾಯಿತು ? ನಾವು ಘಂಟೆಗೆ ಹದಿನೆಂಟು ಮೈಲಿ ಹೋಗುವ ವಿಮಾನದ ಚಿತ್ರವನ್ನು ತಯಾರಿಸಿದ್ದೇವೆ. ಆದರೆ ನಮ್ಮ ಲೆಕ್ಕಾಚಾರದ ಮೇರೆಗೆ ಅದಕ್ಕೆ ಒಂದು ‘ ಮೋಟಾರ್ ’ ಯಂತ್ರವನ್ನು ಜೋಡಿಸಿರಬೇಕು.”

“ಇರಲಿ. ಮೊದಲನೆಯದಾಗಿ ನಾವು ವಿಮಾನವನ್ನು ತಯಾರಿಸಬೇಕು. ‘ ಮೋಟಾರಿ ’ನ ವಿಚಾರವನ್ನು ಆಮೇಲೆ ಯೋಚಿಸೋಣ. ಘಂಟೆಗೆ ಹದಿನೆಂಟು ಮೈಲಿ ವೇಗದಲ್ಲಿ, ಗಾಳಿ ಬೀಸುತ್ತಿರುವ ಕಡೆಯಲ್ಲಿ, ನಮ್ಮ ಯಂತ್ರವು ಸಲೀಸಾಗಿ ಹಾರಬೇಕಷ್ಟೆ. ನಾವು ಗಾಳಿಪಟವನ್ನು ಆಡಿಸಿದಂತೆ ಆ ಯಂತ್ರವನ್ನು ಏಕೆ ಆಡಿಸಬಾರದು ?”

“ನಿಜ, ನಿಜ ! ಮೊದಲು ಅದು ಗಾಳಿಯಲ್ಲಿ ಯಾವರೀತಿ ತೇಲುವುದೆಂಬುದನ್ನು ನೋಡೋಣ. ಇಂಜಿನನ್ನು ಬೇಕಾದಕಡೆಗೆ ತಿರುಗಿಸುವಂಥ ದಾರಗಳನ್ನು ಕಟ್ಟಿ ಭೂಮಟ್ಟದಿಂದಲೇ ದಾರಗಳನ್ನು ಬೇಕಾದಕಡೆಗೆ ಜಗ್ಗಿ ಯಂತ್ರವನ್ನು ತಿರುಗಿಸಬಹುದು, ಅಲ್ಲವೆ ?”

“ಸರಿ ; ಯಂತ್ರವು ಮಟ್ಟಸವಾಗಿ ಹಾರುವಾಗಲಂತೂ ತೊಂದರೆಯಿಲ್ಲ. ಆದರೆ ಒಂದು ಪಕ್ಕವು ಮೇಲಾದರೆ, ಇನ್ನೊಂದು ಪಕ್ಕವು ಕೆಳಗಾಗಿ ಕುಳಿತಿದ್ದವರು ಉರುಳಿಬಿಡಬಹುದು.”

“ಲಿಲಿಯೆಂತಾಲನು ತನ್ನ ಮೈಯನ್ನು ಸರಿಯಾಗಿ ವಾಲಿಸುತ್ತ ಯಂತ್ರವನ್ನು ಸಮತಟ್ಟಾಗಿಟ್ಟುಕೊಳ್ಳುತ್ತಿದ್ದನು. ಆದರೆ ಒಂದು ಯಂತ್ರ

ದೊಳಗೇ ಕುಳಿತಿದ್ದರೆ ಅವನು ಹಾಗೆ ಮಾಡುವುದಕ್ಕಾಗುತ್ತಿರಲಿಲ್ಲ. ನಾನು ಹೇಳುವುದೇನೆಂದರೆ, ರೆಕ್ಕೆಗಳ ತುದಿಗಳನ್ನು ಬೇಕಾದಂತೆ ಬಗ್ಗಿಸುವಂತೆ ಏರ್ಪಾಟು ಮಾಡಿಕೊಂಡರೆ ಯಂತ್ರವು ನೇರವಾಗಿರುವಂತೆ ನೋಡಿಕೊಳ್ಳಬಹುದು. ಹಾಗೆ ಮಾಡಿದರೆ, ಯಂತ್ರವು ಮಟ್ಟಸವಾಗಿ ಹಾರಿ, ಕುಳಿತಿದ್ದವರು ಬೀಳದಂತೆ ತಡೆದಂತಾಗುತ್ತದೆ."

"ಹೇಗಾದರೂ ಆಗಲಿ; ಅದು ಮುಂದಿನ ವಿಚಾರ. ಮೊದಲು ವಿಮಾನವನ್ನು ತಯಾರಿಸಿ, ಹಾರಿಸಿನೋಡೋಣ. ಸರಿಯಾದ ವೇಗದಲ್ಲಿ ಗಾಳಿ ಚಲಿಸುವ ಸ್ಥಳವನ್ನು ಹುಡುಕಬೇಕಲ್ಲ; ಅದಕ್ಕೇನು ಯೋಚನೆ ಮಾಡಿದ್ದೀಯೆ ?"

"ಅದೇನು ಮಹಾ ! ವಾಷಿಂಗ್ಟನ್ನಿನಲ್ಲಿರುವ ವಾಯುಮಾನ ಶೋಧಕರನ್ನು ವಿಚಾರಿಸಿದರೆ ತಿಳಿಯುತ್ತದೆ. ಇಗೋ ! ವರ್ತಮಾನಪತ್ರಿಕೆಗಳನ್ನು ಮಾರುವ ಹುಡುಗ ಬಂದ. ಒಂದು ಪತ್ರಿಕೆಯನ್ನು ಕೊಂಡು ಓದೋಣ."

ಪತ್ರಿಕೆಯನ್ನು ಓದುತ್ತಾ ಆರ್ವಿಲ್ಲನು : "ಎಲ ಎಲಾ ! ಇದೇನು ? ಒಳ್ಳೆ ತಮಾಷೆಯಾಗಿದೆಯಲ್ಲಾ ! ಈ ಸುದ್ದಿಯನ್ನು ಕೇಳು. ಯುದ್ಧದ ಶಾಖೆಯವರು ಪ್ರೊಫೆಸರ್ ಲ್ಯಾಂಗ್ಲಿಯವರಿಗೆ ಐವತ್ತುಸಾವಿರ ಡಾಲರುಗಳನ್ನು ಕೊಟ್ಟು, ಒಬ್ಬ ಮನುಷ್ಯನು ಕುಳಿತು ಸಂಚರಿಸಬಹುದಾದ ವಿಮಾನವನ್ನು ತಯಾರಿಸಬೇಕೆಂದು ಕೋರಿದ್ದಾರಂತೆ. ಎರಡು ವರ್ಷಗಳಿಂದ ಲ್ಯಾಂಗ್ಲಿಯವರು ಪುಟ್ಟ ಪುಟ್ಟ ವಿಮಾನಗಳನ್ನು ತಯಾರಿಸಿದ್ದಾರಂತೆ. ಅವುಗಳಲ್ಲಿ ಒಂದಕ್ಕೆ ಒಂದು ಹಬೆ ಇಂಜಿನನ್ನು ಜೋಡಿಸಿ ಹಾರಿಸಿದಾಗ, ಅದು 'ಪೋಟೊಮ್ಯಾಕ್' ನದಿಯ ಮೇಲೆ ಹಾರಿತಂತೆ. ಆಯಿತು, ನಾವು ಇನ್ನು ತಡ ಮಾಡಿದರೆ ವಿಮಾನವನ್ನು ಬೇರೆ ಯಾರಾದರೂ ಕಂಡುಹಿಡಿದು ತಯಾರಿಸಿ ಬಿಡುತ್ತಾರೆ."

"ಸರಿ, ಸರಿ ! ಲ್ಯಾಂಗ್ಲಿಯವರ ಲೇಖನಗಳನ್ನೆಲ್ಲಾ ಓದಿಲ್ಲವೆ ? ನಮಗೆ ತಿಳಿದಿರುವಷ್ಟು ವಿಚಾರಗಳು ಈ ಭಾಗದಲ್ಲಿ ಅವರಿಗೆ ತಿಳಿದಿಲ್ಲವೆಂದೇ ತೋರುತ್ತದೆ."—

ಮೇಲೆ ಹೇಳಿದಂತೆ ರೈಟ್ ಸಹೋದರರು ಮಾತನಾಡಿಕೊಂಡಂದಿನಿಂದ ಸುಮಾರು ಎರಡು ವರ್ಷಗಳ ಮೇಲೆ ಅವರಿಬ್ಬರೂ ಒಂದುದಿನ ಕಿಟ್ಟಿಹಾಕ್

ಎಂಬ ಒಂದು ಸಣ್ಣ ಗ್ರಾಮಕ್ಕೆ ಹೋದರು. ವಾಷಿಂಗ್ಟನ್ನಿನ ವಾಯು ಮಾಪಕ ಸಂಶೋಧಕರು ಅವರಿಗೆ ಆ ಗ್ರಾಮವನ್ನು ಸೂಚಿಸಿದ್ದರು. ಆ ಗ್ರಾಮವು ಉತ್ತರ ಕರೋಲಿನಾ ಪ್ರಾಂತದಲ್ಲಿ ಸಮುದ್ರತೀರದಲ್ಲಿದ್ದು, ಗ್ರಾಮದ ಬಳಿ ಮೈಲಿಗಟ್ಟಲೆ ಮರಳಿನ ರಾಶಿಯಿದ್ದಿತು. ರೈಟ್ ಸಹೋದರರು ತಮ್ಮ ಪ್ರಯೋಗಗಳನ್ನು ನಡೆಯಿಸುವುದಕ್ಕೆ ಆ ಸ್ಥಳವು ಪ್ರಶಸ್ತವಾಗಿದ್ದಿತು. ಗ್ರಾಮದ ಬಳಿ ಅವರು ತಮ್ಮ ಗುಡಿಸಲನ್ನು ಕಟ್ಟಿಕೊಂಡರು. ಸ್ವಲ್ಪ ದೂರದಲ್ಲಿ ಮರಳಿನ ದಿಣ್ಣೆಗಳೂ ಇದ್ದವು. ವಿಮಾನಗಳನ್ನು ತಯಾರಿಸಿ ಪರೀಕ್ಷಿಸ ಬೇಕೆನ್ನುವವರಿಗೆ ಅದೇ ಸರಿಯಾದ ಸ್ಥಳವೆಂದು ಸ್ಥಳದ ಪೋಸ್ಟುಮಾಸ್ಟರು ಸಹ ಹೇಳಿದರು.

ರೈಟ್ ಸಹೋದರರು ತಾವು ತಯಾರಿಸಿದ್ದ ವಿಮಾನಗಳನ್ನು ತಂದಿದ್ದರು. ಅನಂತರ ಗಾಳಿ ಚೆನ್ನಾಗಿದ್ದಾಗ ಅವುಗಳನ್ನು ಹಾರಿಸುವುದಕ್ಕೆ ಪ್ರಾರಂಭಿಸಿದರು. ಆದರೆ ಗುಡಿಸಿಲಿನ ಪಕ್ಕದಲ್ಲಿ ಮಾಡಿದ ಪ್ರಯೋಗಗಳು ತೃಪ್ತಿಕರವಾಗಿರಲಿಲ್ಲ. ಅದಕ್ಕಾಗಿ ಆ ಸಹೋದರರು ತಮ್ಮ ಯಂತ್ರಗಳೊಡನೆ ಮರಳಿನ ದಿಣ್ಣೆಗಳಕಡೆ ಹೊರಟರು.

ಅವರ ವಿಮಾನದಲ್ಲಿ ಎರಡು ಹಂತಗಳಿದ್ದುವು. ಅವು ಒಂದರ ಮೇಲೊಂದು ಇದ್ದುವು. ಅವುಗಳ ಹಿಂದೆ ಚಚ್ಚೌಕವಾದ ಒಂದು ಹುಟ್ಟು ಇದ್ದಿತು. ಅದರ ಸಹಾಯದಿಂದ ಯಂತ್ರವನ್ನು ಇಷ್ಟಬಂದಂತೆ, ಬಲಗಡೆಗಾಗಲಿ ಎಡಗಡೆಗಾಗಲಿ, ತಿರುಗಿಸಬಹುದಾಗಿದ್ದಿತು. ಅದರ ಮುಂದೆ ವಿಮಾನದ ಕೆಳಮಟ್ಟದ ರೆಕ್ಕೆಯ ಬಳಿ ಸ್ವಲ್ಪ ಖಾಲಿ ಜಾಗವಿದದ್ದಿತು. ಅದಕ್ಕೆ ಹಲಗೆ ಯನ್ನು ಹಾಸಿದ್ದಿತು. ಅದರಮೇಲೆ ಒಬ್ಬನು ಮಲಗಿ ವಿಮಾನವನ್ನು ಮೇಲಕ್ಕೆ ಅಥವಾ ಕೆಳಕ್ಕೆ ತಿರಗಿಸಬಹುದಾಗಿದ್ದಿತು.

ಆ ವರ್ಷ ಬೇಸಗೆಯೆಲ್ಲಾ ಆ ಸಹೋದರರು ಅಂಥ ವಿಮಾನಗಳಲ್ಲಿ ಹಾರಿ, ಗಾಳಿಯಲ್ಲಿ ಬಹಳ ದೂರದ ವರೆಗೆ ತೇಲುವುದನ್ನು ಸ್ವಲ್ಪಕಾಲದಲ್ಲೇ ಕಲಿತರು. ಬೇಸಗೆ ಕಳೆದ ಮೇಲೆ ಅವರು ಆ ಹಳ್ಳಿಯಿಂದ ತಮ್ಮೂರಿಗೆ ಹಿಂದಿರುಗಿಹೋಗಿ, ಚಳಿಗಾಲ ಬಂದಾಗ ಇನ್ನೂ ಉತ್ತಮ ತರಹೆಯ ವಿಮಾನ ವನ್ನು ಕಟ್ಟುವುದಕ್ಕೆ ಪ್ರಾರಂಭಿಸಿದರು.

ಮುಂದಿನ ಬೇಸಗೆಯಲ್ಲೂ ಅವರು ಅದೇ ಕಿಟ್ಟಿಹಾಕ್ ಗ್ರಾಮಕ್ಕೇ ಬಂದರು. ಪುನಃ ವಿಮಾನದಲ್ಲಿ ಹಾರಾಡುವುದನ್ನು ಅಭ್ಯಾಸಮಾಡಿದರು. ಆದರೆ ಫಲಿತಾಂಶಗಳು ಅವರು ನಿರೀಕ್ಷಿಸಿದಷ್ಟು ತೃಪ್ತಿಕರವಾಗಿರಲಿಲ್ಲ. ಅದಕ್ಕಾಗಿ ಅವರು ಪುನಃ ತಮ್ಮ ಕಾರ್ಯಾಲಯಕ್ಕೆ ಹಿಂದಿರುಗಿ, ಒಂದು ದೊಡ್ಡ ಕೊಳವೆಯನ್ನು ತಯಾರಿಸಿದರು. ಆ ಕೊಳವೆಯಿಂದ ಅದರೊಳಗಿರುವ ಗಾಳಿಯನ್ನೆಲ್ಲಾ ತೆಗೆದುಹಾಕುವುದಕ್ಕೂ ಏರ್ಪಾಟುಮಾಡಿಕೊಂಡು ಆ ಸಹೋದರರು ತಮ್ಮ ಪ್ರಯೋಗಗಳನ್ನು ಮುಂದುವರಿಸಿದರು.

1902ನೆಯ ಇಸವಿಯಲ್ಲಿ ರೈಟ್ ಸಹೋದರರು ಮೂರನೆಯ ಸಲ ಕಿಟ್ಟಿಹಾಕ್ ಗ್ರಾಮಕ್ಕೆ ಹೋದರು. ಆ ಸಲ ಅವರ ಹೊಸ ವಿಮಾನವು ಅದ್ಭುತವಾಗಿ ಕಂಡಿತು. ಅದರಿಂದ ಅವರು ಪುನಃ ತಮ್ಮ ಕಾರ್ಯಾಲಯಕ್ಕೆ ಹೋಗಿ ಅದೇ ರೀತಿಯ ದೊಡ್ಡ ವಿಮಾನವೊಂದನ್ನು ತಯಾರಿಸಿ ಅದಕ್ಕೆ ಒಂದು ಇಂಜಿನನ್ನೂ ಜೋಡಿಸುವುದಕ್ಕೆ ಏರ್ಪಾಟುಮಾಡಿದರು. ಈ ಮಧ್ಯೆ ಅದೃಷ್ಟವಶಾತ್ ವಿಜ್ಞಾನರಂಗದಲ್ಲಿ ಒಂದು ಹೊಸ ಸಂಶೋಧನೆ ನಡೆದಿದ್ದಿತು. ಹಬೆಯಿಂದ ಇಂಜಿನನ್ನು ನಡೆಯಿಸುವಂತೆಯೇ ಪೆಟ್ರೋಲಿನ ಸಹಾಯದಿಂದಲೂ ನಡೆಯಿಸಬಹುದೆಂಬುದೇ ಆ ಸಂಶೋಧನೆ. ಪೆಟ್ರೋಲಿನಿಂದ ನಡೆಯುವ ಯಂತ್ರವು ಹಬೆ ಯಂತ್ರಕ್ಕಿಂತ ಹಗುರವಾದುದು. ಆದುದರಿಂದ ರೈಟ್ ಸಹೋದರರು ತಮ್ಮ ಕಾರ್ಯಾಲಯದಲ್ಲಿ ಒಂದು ಪೆಟ್ರೋಲ್ ಯಂತ್ರವನ್ನು ತಯಾರಿಸುವುದಕ್ಕೆ ಉಪಕ್ರಮಿಸಿದರು. ಅದು ತಯಾರಾದಾಗ ಅದಕ್ಕೆ 'ಮೋಟಾರ್‌ಕಾರಿ'ನ ಯಂತ್ರದಂತೆ ನಾಲ್ಕು 'ಕೊಳವೆ'ಗಳಿದ್ದುವು. ಯಂತ್ರವು ಹನ್ನೆರಡು ಅಶ್ವಶಕ್ತಿಯುಳ್ಳದಾಗಿದ್ದಿತು.

ಅಂಥ ಯಂತ್ರವನ್ನು ತಯಾರಿಸುವುದಕ್ಕೆ ಬಹಳ ಕಷ್ಟಪಡಬೇಕಾಯಿತು. ಪುನಃ ಅವರು 1903ನೆಯ ಇಸವಿ ಸೆಪ್ಟೆಂಬರ್ ತಿಂಗಳ ವರೆಗೆ ಕಿಟ್ಟಿಹಾಕ್ ಗ್ರಾಮಕ್ಕೆ ಹೋಗುವುದಕ್ಕಾಗಲೇ ಇಲ್ಲ. ಅಲ್ಲಿಗೆ ಹೋದ ಮೇಲೂ ಅವರಿಗೆ ಹಲವು ಅನನುಕೂಲಗಳುಂಟಾದುವು. ಹುಟ್ಟಿನಮರವು ಹವಾಮಾನದಿಂದ ಡೊಂಕುಡೊಂಕಾಯಿತು ; ಗಾಳಿಯೂ ಅನುಕೂಲವಾಗಿರಲಿಲ್ಲ ; ಸಾಲದುದಕ್ಕೆ ಜೊತೆಗಿದ್ದ ಒಬ್ಬ ಒಳ್ಳೆಯ ಕೆಲಸಗಾರನೂ ಮೃತನಾದನು. ಯಾವು

ದಕ್ಕೂ ಹೆದರದೆ ಆ ಧೈರ್ಯಶಾಲಿಗಳಾದ ಸಹೋದರರು ಅಕ್ಟೋಬರ್ ತಿಂಗಳ ೩ನೆಯ ತಾರೀಖಿನ ದಿನ ಕಿಟ್ಟಿಹಾಕ್ ಗ್ರಾಮಕ್ಕೆ ಹೋದರು. ಅಲ್ಲಿ ಅವರು ಸ್ವಲ್ಪಹೊತ್ತು ಗುಡಿಸಲನ್ನು ಬಿಟ್ಟು ಗ್ರಾಮದೊಳಕ್ಕೆ ತಿರುಗಾಡಿ ಕೊಂಡು ಬರುವುದಕ್ಕೆ ಹೋದರು. ದಾರಿಯಲ್ಲಿ ಅವರು ಒಂದು ವರ್ತಮಾನ ಪತ್ರಿಕೆಯನ್ನು ಕೊಂಡು ಪ್ರೊಫೆಸರ್ ಲ್ಯಾಂಗ್ಲಿಯವರ ಪ್ರಯತ್ನದ ವಿಚಾರ ವೇನಾದರೂ ಒಂದಿದೆಯೇನೋ ಎಂದು ನೋಡುತ್ತಿದ್ದರು. ಏನಾಶ್ಚರ್ಯ! ಅದೇ ವರ್ತಮಾನ ಪತ್ರಿಕೆಯಲ್ಲಿ ಅವರು ನೋಡುತ್ತಿದ್ದ ವಿಚಾರವೇ ಇದ್ದಿತು! ಪ್ರೊಫೆಸರ್ ಲ್ಯಾಂಗ್ಲಿಯವರು ಪೋಟೋಮ್ಯಾಕ್ ನದಿಯಲ್ಲಿ ಒಂದು ದೊಡ್ಡ ದೋಣಿಯಿಂದ ತಮ್ಮ ವಿಮಾನವನ್ನು ಹಾರಿಸಿದರೆಂದೂ, ಹಾರಿಸು ವುದಕ್ಕೆ ಮೊದಲು ವಿಮಾನದ ಯಾವ ಭಾಗವು ಕೆಲಸಮಾಡಬೇಕೋ ಆ ಭಾಗವು ಕೆಟ್ಟುಹೋಯಿತೆಂದೂ, ಆದರೆ ಲ್ಯಾಂಗ್ಲಿಯವರಿಗೆ ತಮ್ಮ ವಿಮಾನವು ಚೆನ್ನಾಗಿ ಹಾರುವುದೆಂಬ ಭರವಸೆಯಿದೆಯೆಂದೂ ವರ್ತಮಾನ ಪತ್ರಿಕೆಯಲ್ಲಿ ಸುದ್ದಿ ಬಂದಿದ್ದಿತು.

"ಇನ್ನು ನಾವು ಅರೆಕ್ಷಣವೂ ಕಾಲ ಕಳೆಯಬಾರದು. ಪುನಃ ಮರಳಿನ ದಿಣ್ಣೆಯಕಡೆ ಹೋಗೋಣ, ನಡೆ" ಎಂದುಕೊಂಡು ಸಹೋದರರಿಬ್ಬರೂ ತಮ್ಮ ಪ್ರಯೋಗಗಳನ್ನು ನಡೆಯಿಸುತ್ತಿದ್ದ ತಾವಿಗೆ ಹಿಂತಿರುಗಿದರು.

ಕಿಟ್ಟಿಹಾಕ್ ಗ್ರಾಮದ ಮರಳುದಿಣ್ಣೆಗಳ ಬಳಿ ರೈಟ್ ಸಹೋದರರಿಬ್ಬ ರೂ ಅವಿಶ್ರಾಂತರಾಗಿ ಪುನಃ ಪ್ರಯೋಗಗಳನ್ನು ನಡೆಸಿದರು. ಆ ಮಧ್ಯೆ ಅತ್ತ ಲ್ಯಾಂಗ್ಲಿಯವರೂ ತಮ್ಮ ವಿಮಾನವನ್ನು ಸರಿಪಡಿಸಿಕೊಂಡು ಅದನ್ನು ಹಾರಿಸುವುದಕ್ಕೆ ಒಂದು ಒಳ್ಳೆಯ ದಿನವನ್ನು ಗೊತ್ತುಮಾಡಿದರು. ತಮ್ಮ ವಿಮಾನಕ್ಕೆ ಸರಿಯಾದ ಭಾಗಗಳನ್ನು ತಯಾರಿಸಿ ಜೋಡಿಸುವ ಸ್ಥಳವನ್ನು ಅವರು 'ಏರೋಡ್ರೋಮ್' ಎಂಬ ಹೆಸರಿನಿಂದ ಕರೆದರು.

1903ನೆಯ ಇಸವಿ ಡಿಸೆಂಬರ್ ೮ನೆಯ ತಾರೀಖು ಲ್ಯಾಂಗ್ಲಿಯವರ ವಿಮಾನಪ್ರದರ್ಶನದ ದಿನವೆಂದು ಗೊತ್ತಾಗಿದ್ದಿತು. ಪೋಟೊಮ್ಯಾಕ್ ನದಿಯ ದಡದಲ್ಲಿ ಅಸಂಖ್ಯಾತ ಜನರು ನೋಟಕ್ಕಾಗಿ ನೆರೆದರು. ನದಿ ಯಲ್ಲಿದ್ದ ಒಂದು ದೊಡ್ಡ ದೋಣಿಯಲ್ಲಿ ಒಂದು ಸಮತಟ್ಟಾದ ಜಾಗದ ಮೇಲೆ ದೊಡ್ಡ ಗಿಡುಗನಂತಿದ್ದ ವಿಮಾನವಿದ್ದಿತು. ವಿಮಾನದ ಸಂಚಾಲಕನು

ಇಂಜಿನನ್ನು ನಡೆಯಿಸುವುದಕ್ಕೆ ಪ್ರಾರಂಭಿಸಿದಾಗ ಲ್ಯಾಂಗ್ಲಿಯವರು ಬಹಳ ಕುತೂಹಲದಿಂದ ನೋಡುತ್ತಿದ್ದರು. ಅವರು ಸಂಜ್ಞೆ ಕೊಟ್ಟಕೂಡಲೆ ವಿಮಾನವು ಚಲಿಸಲು ಪ್ರಾರಂಭಿಸಿತು. ಇನ್ನೇನು—ಅದು ದೋಣಿಯನ್ನು ಬಿಟ್ಟು ಮುಂದಕ್ಕೆ ಹಾರುವುದರಲ್ಲಿದ್ದಾಗ, ವಿಮಾನದ ಬಾಲದ ಭಾಗವು ದೋಣಿಗೆ ಸಿಕ್ಕಿಕೊಂಡಿತು. ಇಂಜಿನಿನ ರಭಸಕ್ಕೆ ವಿಮಾನವು ಸರಕ್ಕನೆ ತಿರುಗಿ ನದಿಯಲ್ಲಿ ದೊಪ್ಪನೆ ಬಿದ್ದುಬಿಟ್ಟಿತು. ವಿಮಾನ ನಡೆಸುವವನನ್ನು ಹೇಗೋ ಕಷ್ಟದಿಂದ ಪಾರುಮಾಡಿದುದಾಯಿತು. ಅಲ್ಲಿಂದ ಮುಂದೆ ಯುದ್ಧಶಾಖೆಯವರು ಲ್ಯಾಂಗ್ಲಿಯವರ ವಿಮಾನವು ತಮಗೆ ತೃಪ್ತಿಕರವಾಗಿಲ್ಲವೆಂದೂ, ಅವರ ಪ್ರಯೋಗಗಳಿಗೆ ಮುಂದೆ ಹಣವನ್ನೊದಗಿಸಲಾಗುವುದಿಲ್ಲವೆಂದೂ ತಿಳಿಸಿಬಿಟ್ಟರು.

ಅದಾದ ಒಂಬತ್ತು ದಿನಗಳಿಗೆ ಕಿಟ್ಟಿಹಾಕ್ ಗ್ರಾಮದಲ್ಲಿ ಒಂದು ಬಹು ಮುಖ್ಯ ಘಟನೆ ನಡೆಯಿತು.

1903ನೆಯ ಇಸವಿ ಡಿಸೆಂಬರ್ 17ನೆಯ ತಾರೀಖಿನ ದಿನ ಹವಾಮಾನವು ಬಹಳ ಅತೃಪ್ತಿಕರವಾಗಿದ್ದಿತು. ಒಂದುಕಡೆ ಚಳಿಯೂ, ಜೊತೆಗೆ ವಿಪರೀತ ಗಾಳಿಯೂ ಸೇರಿ ರೈಟ್ ಸಹೋದರರು ಆದಿನ ತಮ್ಮ ಪ್ರಯೋಗಗಳನ್ನು ನಡೆಯಿಸುವುದಕ್ಕೆ ಅಷ್ಟೇನೂ ಅನುಕೂಲವಾಗಿರಲಿಲ್ಲ. ಆದರೆ ರೈಟ್ ಸಹೋದರರಿಗೆ ಕಾಲವಿಳಂಬವಾಗುವುದು ಇಷ್ಟವಿರಲಿಲ್ಲ. ಆ ದಿನವೂ ಅವರು ತಮ್ಮ ಕಾರ್ಯಕ್ರಮವನ್ನು ಮುಂದುವರಿಸಿದರು. ಗ್ರಾಮದ ಐದು ಜನರು ಅವರ ಪ್ರಯೋಗಗಳನ್ನು ಆಸಕ್ತಿಯಿಂದ ನೋಡುತ್ತಿದ್ದರು. ಮರಳ ದಿಣ್ಣೆಯ ಮೇಲೆ ಎಂಟು ಅಡಿ ಎತ್ತರದಲ್ಲಿ ನಾಲ್ಕು ಕಂಬಗಳ ಮೇಲೆ ಎರಡು ಉದ್ದವಾದ ಕಬ್ಬಿಣದ ಪಟ್ಟಿಗಳನ್ನು ಒಂದರ ಪಕ್ಕದಲ್ಲೊಂದರಂತೆ ಜೋಡಿಸಿದ್ದಿತು. ಅದರ ಒಂದು ಕೊನೆಯಲ್ಲಿ ರೈಟ್ ಸಹೋದರರ 'ಫ್ಲೈಯರ್' ಎಂಬ ವಿಮಾನಯಂತ್ರವಿದ್ದಿತು. ಆ ಯಂತ್ರವೂ ಹಿಂದಿನ ಯಂತ್ರಗಳಂತೆಯೇ ಇದ್ದರೂ ಆಕಾರದಲ್ಲಿ ದೊಡ್ಡದಾಗಿದ್ದಿತು. ಅಲ್ಲದೆ ಆ ಯಂತ್ರಕ್ಕೆ ಒಂದು ಮೋಟಾರ್ ಎಂಜಿನನ್ನು ಜೋಡಿಸಿದ್ದಿತು. ಮೋಟಾರು ಯಂತ್ರದೊಡನೆ ಸಂಬಂಧವುಳ್ಳದಾಗಿ ರೆಕ್ಕೆಗಳ ಹಿಂದುಗಡೆಗೆ ಎರಡು ಹುಟ್ಟುಗಳಿದ್ದುವು. ಆಗ ಪ್ರಾತಃಕಾಲ ಸುಮಾರು ಹತ್ತೂವರೆ ಘಂಟೆಯಾಗಿದ್ದಿತು.

ಎಲ್ಲಾ ಸಿದ್ಧತೆಗಳೂ ಪೂರೈಸಿದಮೇಲೆ ಸಹೋದರರು ಒಬ್ಬರನ್ನೊಬ್ಬರು ನೋಡಿದರು. ತಮಾಷೆಗಾಗಿ ಆರ್ವಿಲನು ಒಂದು ನಾಣ್ಯವನ್ನು ಮೇಲಕ್ಕೆಸೆದನು. ವಿಲ್ಬರ್ ಅದು ಬಿದ್ದುದನ್ನು ನೋಡಿ ನಗುತ್ತಾ 'ಖೋಟಾ' ಎಂದನು. ಆರ್ವಿಲ್ ಅದನ್ನು ಗಮನಿಸದೆ ಸಂತೋಷಚಿತ್ತದಿಂದ ವಿಮಾನದೊಳಕ್ಕೆ ಹೋಗಿ ಕೆಳಗಿನ ಹಂತದಲ್ಲಿ ಮುಖಮಡಿಯಾಗಿ ಮಲಗಿದನು. ಸುತ್ತಲೂ ನೆರೆದಿದ್ದವರು ನೋಡುತ್ತಿದ್ದರು. ಇಂಜಿನನ್ನು ನಡೆಯಿಸಿದುದೂ ಆಯಿತು. ವಿಮಾನವು ಸರಳುಗಳಮೇಲೆ ಮುಂದಕ್ಕೆ ಹೋಗಲಾರಂಭಿಸಿತು. ವಿಲ್ಬರ್ ಹರ್ಷದಿಂದ ಅದರ ಜೊತೆಗೇ ಓಡಲಾರಂಭಿಸಿದನು. ಕ್ರಮಕ್ರಮವಾಗಿ ವಿಮಾನವು ರಭಸವಾಗಿ ಹಾರುವುದಕ್ಕೆ ಪ್ರಾರಂಭಿಸಿತು. ಅದು ನಲವತ್ತು ಅಡಿಗಳ ದೂರ ಸರಳುಗಳ ಮೇಲೆ ಹರಿದು ಅನಂತರ ಮೇಲಕ್ಕೆ ಹಾರಿತು. ಸರಳುಗಳಿಂದ ಮೇಲಕ್ಕೆ ಅದು ಸುಮಾರು ಹತ್ತು ಅಡಿಗಳು ಮೇಲಕ್ಕೇರಿತು. ಅನಂತರ ಅದು ಕೆಳಗಿಳಿದು ಮರಳಿನ ರಾಶಿಯ ಮೇಲೆ ನಿಶ್ಚಲವಾಗಿ ನಿಂತಿತು. ವಿಮಾನವು ಆಗ ಗಂಟೆಗೆ ಹತ್ತುಮೈಲಿ ವೇಗದಲ್ಲಿ ಹಾರಿದ್ದಿತು.

ಅದೇ ದಿನ ಬೆಳಗ್ಗೆ ರೈಟ್ ಸಹೋದರರು ಇನ್ನೂ ಮೂರು ಸಲ ಆ ವಿಮಾನವನ್ನು ಹಾರಿಸಿದರು. ಅದನ್ನು ನಡೆಯಿಸುವುದರಲ್ಲಿ ಹೆಚ್ಚು ಕುಶಲತೆಯುಂಟಾದಂತೆಲ್ಲಾ ಅವರು ಹೆಚ್ಚು ಹೆಚ್ಚು ದೂರ ಹಾರಿಸಿದರು. ನಾಲ್ಕನೆಯ ಬಾರಿ ಅವರು ಪೂರ್ತಿಯಾಗಿ ಒಂದು ನಿಮಿಷ ಕಾಲ ಹಾರಿದರು. ಆಗ ವಿಮಾನವು ಸುಮಾರು 852 ಅಡಿಗಳಷ್ಟು ದೂರ ಹಾರಿದ್ದಿತು.

ಆ ಸಹೋದರರಿಗೆ ಎಷ್ಟು ಸಂತೋಷವಾಯಿತೆಂಬುದನ್ನು ಬರೆದು ತಿಳಿಸುವುದಕ್ಕೆ ಸಾಧ್ಯವಿಲ್ಲ. ಕೇವಲ ಗಾಳಿಯಲ್ಲಿ ತೇಲುವುದಕ್ಕೆ ಬದಲಾಗಿ ಅವರು ವಿಮಾನವನ್ನು ನಡೆಯಿಸುವುದನ್ನು ಮೊಟ್ಟಮೊದಲಿಗೆ ಕಂಡುಹಿಡಿದವರಾದರು. ಅಲ್ಲದೆ ಅವರು ಗಾಳಿಗಿಂತ ಭಾರವಾದ ಯಂತ್ರದಲ್ಲಿ ಹಾರಿದ್ದುದೂ ಒಂದು ವಿಶೇಷವಾಗಿದ್ದಿತು. ತಾವು ಕಂಡುಹಿಡಿದಂಥ ವಿಮಾನದಲ್ಲಿ ಹಾರುವುದು ಸಾಧ್ಯವೆಂಬುದು ಅವರಿಗೆ ಖಚಿತವಾಗಿಬಿಟ್ಟಿತು. ಇದರಿಂದ ಅವರು ತಮ್ಮ ಊರಿಗೆ ಹಿಂತಿರುಗಿ, ಇನ್ನೂ ದೊಡ್ಡದಾದ ಮತ್ತು ಉತ್ತಮವಾದ ವಿಮಾನವನ್ನು ತಯಾರಿಸಿದರು. ಅನಂತರ ತಾವು ವಿಮಾನ ನಡೆಯಿಸುವುದನ್ನು



ಆ ಸಹೋದರರಿಗೆ ಎಷ್ಟು ಸಂತೋಷವಾಯಿತೆಂಬುದನ್ನು ಬರೆದು ತಿಳಿಸಲು ಸಾಧ್ಯವಿಲ್ಲ

ಬಂದು ನೋಡಬೇಕೆಂದು ವೃತ್ತಪತ್ರಿಕೆಯ ಕೆಲಸಗಾರರಿಗೆ ಬಿನ್ನವಿಸಿಕೊಂಡರು. ಆದರೆ ವೃತ್ತಪತ್ರಿಕೆಯವರು ನೋಡುವುದಕ್ಕೆ ಬಂದ ದಿನವೇ ಯಂತ್ರದಲ್ಲಿ ಯಾವುದೋ ನ್ಯೂನತೆಯಿಂದ ವಿಮಾನವನ್ನು ಸರಿಯಾಗಿ ನಡೆಯಿಸುವುದಕ್ಕಾಗದೆ ಹೋಯಿತು. ಪತ್ರಿಕೆಯ ಸಿಬ್ಬಂದಿಯವರು ಹತಾಶರಾಗಿ, ರೈಟ್ ಸಹೋದರರು ಕಂಡುಹಿಡಿದಿದ್ದುದನ್ನು ನಂಬದೆ, ಹಿಂತಿರುಗಿದರು.

ವಿಮಾನದಲ್ಲಿ ಹಾರುವುದಕ್ಕೆ ಪ್ರಯತ್ನಿಸಿದವರು ಹತಾಶರಾಗಿದ್ದ ವಿಷಯವನ್ನು ಕೇಳಿಕೇಳಿ ಜನರು ಬೇಸತ್ತಿದ್ದರು. ಆದುದರಿಂದ ರೈಟ್ ಸಹೋದರರು ಕಂಡುಹಿಡಿದುದು ಕೂಡಲೇ ಯಾರ ಗಮನಕ್ಕೂ ಬರಲಿಲ್ಲ. ಒಂದು ದಿನ ಈ ಸಹೋದರರು ಎಂದಿನಂತೆ ತಮ್ಮ ಪ್ರಯೋಗಗಳನ್ನು ನಡೆಯಿಸುತ್ತಾ ವಾಸ್ತವವಾಗಿ ವಿಮಾನದಲ್ಲಿ ಸಂಚರಿಸಿದುದನ್ನು ಪಕ್ಕದ ಪೊದೆಯೊಂದರಲ್ಲಿ ಅವಿತಿದ್ದ ಒಬ್ಬ ವೃತ್ತಪತ್ರಿಕೆ ಸುದ್ದಿಗಾರನು ನೋಡಿದನು. ತಾನು ಕಂಡ ದೃಶ್ಯದಿಂದ ಬೆರಗಾಗಿ ಆತನು ಅಂಚೆ ಕಚೇರಿಗೆ ಓಡಿಹೋಗಿ ಆ ವಿಚಾರವನ್ನು ತಂತಿಯಮೂಲಕ ತನ್ನ ಮುಖ್ಯಕಚೇರಿಗೆ ತಿಳಿಸಿದನು. ಆದರೆ ಸಂಪಾದಕರು ಅದನ್ನು ನಂಬಲೇ ಇಲ್ಲ. ಅಷ್ಟೇಅಲ್ಲದೆ ಅಂಥ 'ಸುಳ್ಳು' ಸುದ್ದಿಯನ್ನು ಕಳುಹಿಸಿದ ಸುದ್ದಿಗಾರನಿಗ ಶಿಕ್ಷೆಯನ್ನು ವಿಧಿಸಿದರಂತೆ!

ಆದರೆ ಸತ್ಯಾಂಶವು ಎಂದಿದ್ದರೂ ಹೊರಬೀಳತಕ್ಕದ್ದೇ ಅಲ್ಲವೆ? ರೈಟ್ ಸಹೋದರರು ತಾವು ಕಂಡುಹಿಡಿದುದನ್ನು ಪ್ರದರ್ಶಿಸಿ ತೋರಿಸುವುದು ಮುಂದೆ ಸಾಧ್ಯವಾಯಿತು. ತಾವು ಕಂಡುಹಿಡಿದುದರಮೇಲೆ ಅವರು ಸಂಪೂರ್ಣ ಸ್ವಾಮ್ಯದ ಹಕ್ಕನ್ನೂ ಪಡೆದುಕೊಂಡರು. ತಮ್ಮ ಹಕ್ಕನ್ನು ಇಷ್ಟವಿದ್ದರೆ ಕೊಂಡುಕೊಳ್ಳಬಹುದೆಂದು ಬ್ರಿಟಿಷ್ ಸರ್ಕಾರಕ್ಕೂ, ಅಮೆರಿಕ ಸರ್ಕಾರಕ್ಕೂ ಪತ್ರ ಬರೆದರು. ಆದರೆ ಆ ಎರಡು ಸರ್ಕಾರಗಳವರೂ ಈ ವಿಚಾರದಲ್ಲಿ ಆಸಕ್ತಿಯನ್ನು ತೋರಿಸಲಿಲ್ಲ. ಇದರಿಂದ 1908ನೆಯ ಇಸವಿಯಲ್ಲಿ ವಿಲ್ಬರನು ಫ್ರಾನ್ಸ್ ದೇಶಕ್ಕೆ ಹೋಗಿ ವಿಮಾನ ನಡೆಯಿಸುವುದನ್ನು ಅಲ್ಲಿನ ಜನರಿಗೆ ತೋರಿಸಬೇಕೆಂದು ಪ್ರಯತ್ನಿಸಿದನು. ಆವೇಳೆಗಾಗಲೇ ಫ್ರಾನ್ಸಿನಲ್ಲೂ ಇತರ ಕೆಲವರು ವಿಮಾನ ನಡೆಯಿಸುವುದನ್ನು ಕಂಡುಹಿಡಿದಿದ್ದರು. ಆದರೆ ವಿಲ್ಬರ್ ರೈಟನು ಅವರು ವಿಮಾನನಡೆಯಿಸುವುದನ್ನು

ನೋಡಿದಮೇಲೆ ತಾನು ಅವರಿಗಿಂತಲೂ ಚೆನ್ನಾಗಿ ವಿಮಾನ ನಡೆಯಿಸಬಲ್ಲೆನೆಂದು ಹೇಳಿ, ತನ್ನ ವಿಮಾನದಲ್ಲಿ ಕುಳಿತು ಎರಡುಗಂಟೆ ಇಪ್ಪತ್ತು ನಿಮಿಷಗಳಲ್ಲಿ ತೊಂಬತ್ತು ಮೈಲಿಗಳ ದೂರ ಹಾರಿದನು.

ಇದಾದ ಕೆಲವು ವರ್ಷಗಳಲ್ಲಿ ವಿಮಾನದಲ್ಲಿ ಅನೇಕ ಉತ್ತಮ ಬದಲಾವಣೆಗಳಾದುವು. 1909ರಲ್ಲಿ ಬ್ಲೆರಿಯಟ್ ಎಂಬಾತನು ವಿಮಾನದಲ್ಲಿ ಇಂಗ್ಲಿಷ್ ಕಡಲ್ಗಾಲುವೆಯಮೇಲೆ ಹಾರಿ ಅದನ್ನು ದಾಟಿದನು. 1919ರಲ್ಲಿ ಅಟ್ಲಾಂಟಿಕ್ ಮಹಾಸಾಗರವನ್ನು ವಿಮಾನದ ಮೂಲಕ ಲಂಘಿಸುವುದು ಸಾಧ್ಯವಾಯಿತು. 1924ರಲ್ಲಿ ಅಮೇರಿಕದ ಸಂಯುಕ್ತಸಂಸ್ಥಾನಗಳ ಸೈನ್ಯದ ವಿಮಾನಗಳು ಪ್ರಪಂಚವನ್ನೆಲ್ಲಾ ಸುತ್ತಿಬಂದುವು.

ವಿಲ್ಬರ್ ರೈಟ್ 1912ರಲ್ಲಿ ಮೃತನಾದನು. ಅರ್ವಿಲ್‌ರೈಟನು ಇನ್ನೂ ಹೆಚ್ಚುಕಾಲ ಬದುಕಿದ್ದನು.

ರೈಟ್ ಸಹೋದರರ ಅವಿಶ್ರಾಂತ ಶ್ರಮ, ತಾಳ್ಮೆ, ಶ್ರದ್ಧೆಗಳು ಅಭಿನಂದನೀಯವಾದುವುಗಳು. ಅವರೇನೂ ವಿಜ್ಞಾನಶಾಸ್ತ್ರವನ್ನು ಮೊದಲಿನಿಂದ ಅಭ್ಯಾಸಮಾಡಿದವರಾಗಿರಲಿಲ್ಲ. ಒಳ್ಳೆಯ ಪ್ರಯೋಗಶಾಲೆಯ ಸೌಕರ್ಯವೂ ಅವರಿಗಿರಲಿಲ್ಲ. ಆದರೂ ಅವರು ವಿಮಾನಸಂಚಾರದಂಥ ಅದ್ಭುತವಾದ ಶೋಧನೆಯನ್ನು ನಡೆಯಿಸಿ ಕೃತಕೃತ್ಯರಾದರು.



# ಹೊಸ ಪ್ರಕಟಣೆಗಳು





೧. ನಾವು ಕಂಡ ಬೆಂಗಳೂರು

( ಪ್ರವಾಸ ಸಾಹಿತ್ಯ )—ಮ. ನ. ಮೂರ್ತಿ ೧–೫೦

೨. ನಮ್ಮ ಪ್ರವಾಸ

( ಪ್ರವಾಸ ಸಾಹಿತ್ಯ )—ಮ. ನ. ಮೂರ್ತಿ ೧–೬೦

೩. ಮನೆಗೆ ಬಂದ ಮಹಾಲಕ್ಷ್ಮಿ

ತ. ರಾ. ಸು. ೧–೨೫

೪. ಹಿಂದೂಸ್ಥಾನದ ಕಿರುಗತೆಗಳು

ಬಿ. ಎಸ್. ರಾಮಸ್ವಾಮಯ್ಯಂಗಾರ್ ೧–೨೫

೫. ನೀತಿಗಳ ನೆಲೆಗಟ್ಟು

ಹೊಸಕೆರೆ ಚಿದಂಬರಯ್ಯ ೨–೦೦





ಎಸ್. ಎಸ್. ಎನ್. ಬುಕ್ ಡಿಪೋ

ನ್ಯೂ ಮಾರ್ಕೆಟ್, ಬೆಂಗಳೂರು ೨